7

<u>ಕರ್ನಾಟಕ ವಿಧಾನ ಸಭೆ</u>

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1721
2) ಸದಸ್ಯರ ಹೆಸರು : ಶ್ರೀ ಅಬ್ಬಯ್ಯ ಪ್ರಸಾದ್ (ಹುಬ್ಬಳ್ಳಿ-ಧಾರವಾಡ ಪೂರ್ವ)
3) ಉತ್ತರಿಸುವ ದಿನಾಂಕ: : 23-03-2021
4) ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಪೆಟ್ರೋಲ್ ಮತ್ತು ಡೀಸೆಲ್ ದರ ಏರಿಕೆಯಿಂದ ಸಾರ್ವಜನಿಕರಿಗೆ ಅದರಲ್ಲೂ ಬಡವರಿಗೆ ಆರ್ಥಿಕವಾಗಿ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯದಲ್ಲಿ ಪೆಟ್ರೋಲ್ ಮತ್ತು ಡೀಸೆಲ್ ಬೆಲೆ ಏರಿಕೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಬಂದಿದ್ದಲ್ಲಿ, ಏರಿಕೆಯಾಗುತ್ತಿರುವ ದರವನ್ನು ಕಡಿಮೆ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು? | ಪೆಟ್ರೋಲ್ ಮತ್ತು ಡೀಸೆಲ್‌ಗಳ ಬೆಲೆಯು ಮಾರುಕಟ್ಟೆ ಆಧಾರಿತವಾಗಿದ್ದು, ಅವುಗಳ ಮಾರಾಟದ ಬೆಲೆಯಲ್ಲಿ ದಿನೇದಿನೇ ಬದಲಾವಣೆಗಳಾಗುತ್ತಿದೆ. ಮೂಲ ಬೆಲೆಯಲ್ಲಿ ಹೆಚ್ಚಳವಾದಾಗ ಅವುಗಳ ಮಾರಾಟದ ತೆರಿಗೆ ಹೆಚ್ಚಳವಾಗುತ್ತದೆ. ದಕ್ಷಿಣದ ರಾಜ್ಯಗಳಿಗೆ ಹೋಲಿಸಿದಾಗ ಕೇರಳ ರಾಜ್ಯ ಹೊರತುಪಡಿಸಿದರೆ ಪೆಟ್ರೋಲ್ ಬೆಲೆಯು ಕರ್ನಾಟಕದಲ್ಲಿಯೇ ಕಡಿಮೆ ಇರುತ್ತದೆ. ಡೀಸೆಲ್ ಬೆಲೆಯು ದಕ್ಷಿಣದ ಇತರ ರಾಜ್ಯಗಳಿಗಿಂತ ಕರ್ನಾಟಕದಲ್ಲಿಯೇ ಅತೀ ಕಡಿಮೆ ಇರುತ್ತದೆ. |

ಸಂಖ್ಯೆ: ಆಇ 38 ಸಿಎಸ್‌ಎಲ್ 2021

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2276

ಉತ್ತರಿಸಬೇಕಾದ ದಿನಾಂಕ : 23/03/2021

ಸದಸ್ಯರ ಹೆಸರು : ಡಾ: ಅಂಜಲಿ ಹೇಮಂತ್ ನಿಂಬಾಳ್ಕರ್ (ಖಾನಾಪುರ)

ಉತ್ತರಿಸುವ ಸಚಿವರು : ಯುವ ಸಬಲೀಕರಣ ಮತ್ತು ಕ್ರೀಡಾ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು.

***

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆ ಖಾನಾಪೂರ ತಾಲ್ಲೂಕಿನಲ್ಲಿ ಗ್ರಾಮೀಣ ಕ್ರೀಡೆಗಳ ಉತ್ತೇಜನಕ್ಕೆ ಗ್ರಾಮ ಮಟ್ಟದಲ್ಲಿ ಗರಡಿ ಮನೆಗಳನ್ನು ನಿರ್ಮಿಸುವ ಅವಶ್ಯಕತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಈ ತಾಲ್ಲೂಕಿನಲ್ಲಿ ಇದುವರೆಗೆ ಎಷ್ಟು ಗರಡಿ ಮನೆಗಳನ್ನು ನಿರ್ಮಿಸಲಾಗಿದೆ; | ಖಾನಾಪುರ ತಾಲ್ಲೂಕಿನಲ್ಲಿ ಇದುವರೆಗೆ ಒಟ್ಟು ಮೂರು ಗರಡಿ ಮನೆಗಳನ್ನು ನಿರ್ಮಿಸಲಾಗಿದೆ.<br><br>ಮುಗಳಿಹಾಳ ಗ್ರಾಮದಲ್ಲಿ ಗರಡಿ ಮನೆ ನಿರ್ಮಾಣ ಕಾಮಗಾರಿ ಪ್ರಗತಿಯಲ್ಲಿರುತ್ತದೆ. |
| ಇ) | ಇದಕ್ಕಾಗಿ ಬಿಡುಗಡೆಯಾದ ಅನುದಾನವೆಷ್ಟು? (ಕಳೆದ ಮೂರು ವರ್ಷಗಳ ವಿವರ ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ಒಟ್ಟು ರೂ 10.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.<br><br>2018-19ನೇ ಸಾಲಿನಲ್ಲಿ ಮುಗಳಿಹಾಳ ಗ್ರಾಮದಲ್ಲಿ ಗರಡಿ ಮನೆ ನಿರ್ಮಾಣಕ್ಕಾಗಿ ದಿನಾಂಕ: 08.03.2019ರಂದು ಆಡಳಿತಾತ್ಮಕ ಅನುಮೋದನೆ ನೀಡಿ, ರೂ 10.00 ಲಕ್ಷಗಳ ಅನುದಾನವನ್ನು ಪಂಚಾಯತ್ ರಾಜ್ಯ ಇಂಜಿನೀಯರಿಂಗ್ ವಿಭಾಗ, ಬೆಳಗಾವಿ ಇವರಿಗೆ ಬಿಡುಗಡೆ ಮಾಡಲಾಗಿದೆ. ಕಾಮಗಾರಿ ಪ್ರಗತಿಯಲ್ಲಿದೆ. |

ವೈಎಸ್‌ಡಿ-ಇಬಿಬಿ/73/2021.

(ಡಾ|| ನಾರಾಯಣ ಗೌಡ)
ಯುವ ಸಬಲೀಕರಣ ಮತ್ತು ಕ್ರೀಡಾ ಹಾಗೂ
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು.

## ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ :** **2277**

**ಉತ್ತರಿಸಬೇಕಾದ ದಿನಾಂಕ :** **23/03/2021**

**ಸದಸ್ಯರ ಹೆಸರು :** **ಡಾ: ಅಂಜಲಿ ಹೇಮಂತ್ ನಿಂಬಾಳ್ಕರ್ (ಖಾನಾಪುರ)**

**ಉತ್ತರಿಸುವ ಸಚಿವರು :** **ಯುವ ಸಬಲೀಕರಣ ಮತ್ತು ಕ್ರೀಡಾ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು.**

***

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಭಾರತೀಯ ಸೈನ್ಯಕ್ಕೆ ಅತಿ ಹೆಚ್ಚು ಸೈನಿಕರನ್ನು ನೀಡಿರುವ ಬೆಳಗಾವಿ ಜಿಲ್ಲೆಯ ಖಾನಾಪುರ ತಾಲ್ಲೂಕಿನಲ್ಲಿ ದೇಶಕ್ಕೆ ಉತ್ತಮ ಸೈನಿಕರನ್ನು ತಯಾರು ಮಾಡಲು ಕ್ರೀಡಾ ಹಾಸ್ಟೆಲ್ ಸ್ಥಾಪಿಸುವ ಅಗತ್ಯವಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಳಗಾವಿ ನಗರದಲ್ಲಿ ಕ್ರೀಡಾ ವಸತಿ ನಿಲಯ ಕಾರ್ಯನಿರ್ವಹಿಸುತ್ತಿದ್ದು, ಕುಸ್ತಿ, ಜೂಡೋ, ವಾಲಿಬಾಲ್, ಅಥ್ಲೆಟಿಕ್, ಸೈಕ್ಲಿಂಗ್ ಕ್ರೀಡೆಗಳಲ್ಲಿ ಕ್ರೀಡಾಪಟುಗಳಿಗೆ ತರಬೇತಿ ನೀಡಲಾಗುತ್ತಿದೆ.<br>ಖಾನಾಪುರ ತಾಲ್ಲೂಕಿನಲ್ಲಿ ಕ್ರೀಡಾ ವಸತಿ ನಿಲಯ ಪ್ರಾರಂಭಿಸುವ ಪ್ರಸ್ತಾವನೆ ಪ್ರಸ್ತುತ ಸರ್ಕಾರದ ಮುಂದಿರುವುದಿಲ್ಲ. |
| ಆ) | ಬೆಳಗಾವಿ ಜಿಲ್ಲೆಯಲ್ಲಿ ಇರುವ ಕ್ರೀಡಾ ಹಾಸ್ಟೆಲ್‌ಗಳಾವುವು; | ಬೆಳಗಾವಿ ಜಿಲ್ಲೆಯ ಬೆಳಗಾವಿ ನಗರದಲ್ಲಿ ಕ್ರೀಡಾ ವಸತಿ ನಿಲಯ ಕಾರ್ಯ ನಿರ್ವಹಿಸುತ್ತಿದ್ದು, 5ನೇ ತರಗತಿಯಿಂದ ಪದವಿ ಹಂತದವರೆಗಿನ ಕ್ರೀಡಾಪಟುಗಳಿಗೆ ಪ್ರವೇಶಾವಕಾಶವಿದ್ದು, ಕುಸ್ತಿ, ಜೂಡೋ, ವಾಲಿಬಾಲ್, ಅಥ್ಲೆಟಿಕ್, ಸೈಕ್ಲಿಂಗ್ ಕ್ರೀಡೆಗಳಲ್ಲಿ ತರಬೇತಿ ನೀಡಲಾಗುತ್ತಿದೆ. |
| ಇ) | ಖಾನಾಪೂರ ತಾಲ್ಲೂಕಿನಲ್ಲಿ ಕ್ರೀಡಾ ಹಾಸ್ಟೆಲ್ ತೆರೆಯಲು ಸರ್ಕಾರವು ಯಾವ ಕ್ರಮ ಕೈಗೊಳ್ಳಲಿದೆ? | ಮೇಲೆ ಉಪ ಪ್ರಶ್ನೆ (ಅ)ಗೆ ನೀಡಿರುವ ಉತ್ತರದಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ. |

**ವೈಎಸ್‌ಡಿ-ಇಬಿಬಿ/74/2021.**

**(ಡಾ|| ನಾರಾಯಣ ಗೌಡ)**
ಯುವ ಸಬಲೀಕರಣ ಮತ್ತು ಕ್ರೀಡಾ ಹಾಗೂ
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಸಚಿವರು.

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2275

ಉತ್ತರಿಸಬೇಕಾದ ದಿನಾಂಕ : 23/03/2021

ಸದಸ್ಯರ ಹೆಸರು : ಡಾ: ಅಂಜಲಿ ಹೇಮಂತ್ ನಿಂಬಾಳ್ಕರ್ (ಖಾನಾಪುರ)

ಉತ್ತರಿಸುವ ಸಚಿವರು : ಯುವ ಸಬಲೀಕರಣ ಮತ್ತು ಕ್ರೀಡಾ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು.

***

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆ ಖಾನಾಪೂರ ಪಟ್ಟಣದಲ್ಲಿ ಕಳೆದ ಮೂರು ವರ್ಷಗಳಿಂದ ಒಳಾಂಗಣ ಕ್ರೀಡಾಂಗಣ ಅಭಿವೃದ್ಧಿ ಕಾಮಗಾರಿಯ ಪ್ರಸ್ತಾವನೆಯು ಅನುಮೋದನೆಗೆ ಬಾಕಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಖಾನಾಪೂರ ತಾಲ್ಲೂಕಿನಲ್ಲಿ ಒಳಾಂಗಣ ಕ್ರೀಡಾಂಗಣ ನಿರ್ಮಾಣಕ್ಕೆ ಸರ್ಕಾರವು ತೆಗೆದುಕೊಂಡಿರುವ ಕ್ರಮಗಳೇನು; | ಅನುದಾನದ ಕೊರತೆಯಿಂದಾಗಿ ಪ್ರಗತಿಯಲ್ಲಿರುವ ಕಾಮಗಾರಿಗಳನ್ನು ಪೂರ್ಣಗೊಳಿಸಲು ಮೊದಲ ಆದ್ಯತೆ ನೀಡಲಾಗಿದೆ. ಆದ್ದರಿಂದ, ಖಾನಾಪುರ ತಾಲ್ಲೂಕಿನ ಒಳಾಂಗಣ ಕ್ರೀಡಾಂಗಣ ನಿರ್ಮಾಣ ಕಾಮಗಾರಿಗೆ ಅನುದಾನ ಹಂಚಿಕೆ ಸಾಧ್ಯವಾಗಿರುವುದಿಲ್ಲ. |
| ಇ) | ಈ ತಾಲ್ಲೂಕಿನಲ್ಲಿ ಒಳಾಂಗಣ ಕ್ರೀಡಾಂಗಣ ನಿರ್ಮಾಣಕ್ಕೆ ಬಿಡುಗಡೆ ಮಾಡಿರುವ ಅನುದಾನವೆಷ್ಟು? | ಮೇಲಿನ ಉತ್ತರದಿಂದಾಗಿ ಈ ಪ್ರಶ್ನೆ ಉದ್ಭವಿಸುವುದಿಲ್ಲ. |

**ವೈಎಸ್‌ಡಿ-ಇಬಿಬಿ/72/2021.**

(ಡಾ|| ನಾರಾಯಣ ಗೌಡ)

ಯುವ ಸಬಲೀಕರಣ ಮತ್ತು ಕ್ರೀಡಾ ಹಾಗೂ

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು.

ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2279
2. ಸದಸ್ಯರ ಹೆಸರು : ಶ್ರೀ ಬಸವನಗೌಡ ದದ್ದಲ
3. ಉತ್ತರಿಸುವ ದಿನಾಂಕ : 23/03/2021
4. ಉತ್ತರಿಸುವವರು : ಸಣ್ಣ ನೀರಾವರಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಯಚೂರು ತಾಲ್ಲೂಕಿನ ಕಟಕನೂರು ಏತ ನೀರಾವರಿ ಯೋಜನೆ ಕಾಮಗಾರಿ ಕಳೆದ 20 ವರ್ಷಗಳ ಹಿಂದೆ ಪ್ರಾರಂಭವಾಗಿದ್ದು, ಪ್ರಸ್ತುತ ಯಾವ ಹಂತದಲ್ಲಿದೆ; | ಕಟಕನೂರು ಏತ ನೀರಾವರಿ ಯೋಜನೆಯ ಡೆಲಿವರಿ ಛೇಂಬರ್‌ಗೆ ಪೈಪ್ ಲೈನ್ ಜೋಡಣೆ ಕೆಲಸ ಹೊರತುಪಡಿಸಿ ಇನ್ನುಳಿದ ಕೆಲಸಗಳು ಪೂರ್ಣ ಗೊಂಡಿರುತ್ತವೆ. |
| ಆ | ಈ ಯೋಜನೆಗೆ ಇದುವರೆಗೂ ಎಷ್ಟು ಅನುದಾನ ನೀಡಲಾಗಿದೆ; ಹಾಗೂ ಎಷ್ಟು ಹಣ ಖರ್ಚು ಮಾಡಲಾಗಿದೆ; (ವಿವರ ನೀಡುವುದು) | ಸದರಿ ಕಾಮಗಾರಿಯ ರೂ.68.80 ಲಕ್ಷ ಮೊತ್ತದ ಅಂದಾಜು ಪಟ್ಟಿಗೆ ಆರ್.ಐ.ಡಿ.ಎಫ್–8ರಡಿ ಅಕ್ಟೋಬರ್–1995ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ. ತದನಂತರ, ರೂ.150.00 ಲಕ್ಷ ಅಂದಾಜು ಮೊತ್ತದ ಬಾಕಿ ಕಾಮಗಾರಿಗೆ ವಿಶೇಷ ಅಭಿವೃದ್ಧಿ ಯೋಜನೆಯಡಿ ಜುಲೈ–2012ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ಒಟ್ಟಾರೆಯಾಗಿ ಕಾಮಗಾರಿಗೆ ರೂ.218.80 ಲಕ್ಷ ಅನುದಾನ ನೀಡಿದ್ದು, ರೂ.216.30ಲಕ್ಷ ವೆಚ್ಚ ಮಾಡಲಾಗಿದೆ. |
| ಇ | ಸದರಿ ಕಾಮಗಾರಿ ಇದುವರೆಗೂ ಪೂರ್ಣಗೊಳ್ಳದಿರಲು ಅಥವಾ ವಿಳಂಬ ವಾಗಿರುವುದಕ್ಕೆ ಕಾರಣಗಳೇನು; | ಈ ಯೋಜನೆಯ ಡೆಲಿವರಿ ಛೇಂಬರ್‌ನ್ನು ಮಂಜೂರಾದ ಅಂದಾಜು ಪಟ್ಟಿಯ ನಕ್ಷೆಯಂತೆ ನಿರ್ಮಿಸಲು ರೈತರು ಸ್ಥಳ ನೀಡದ ಕಾರಣ, ಸ್ಥಳ ಬದಲಾವಣೆ ಮಾಡಿ ಡೆಲಿವರಿ ಛೇಂಬರ್ ನಿರ್ಮಿಸಲಾಗಿತ್ತು. ಪುನಃ ರೈತರು ಮಂಜೂರಾದ ಅಂದಾಜು ಪಟ್ಟಿಯ ನಕ್ಷೆಯಲ್ಲಿದ್ದಂತೆ ಮೂಲ ಸ್ಥಳದಲ್ಲಿ ಡೆಲಿವರಿ ಛೇಂಬರ್ ನಿರ್ಮಿಸಲು ಕಾರಣ ನೀಡಿ, ನಿರ್ಮಿಸಲಾಗಿದ್ದ ಡೆಲಿವರಿ ಛೇಂಬರ್‌ನ್ನು ರೈತರು ನಾಶಪಡಿಸಿರುತ್ತಾರೆ. ಮೂಲ ಸ್ಥಳದಲ್ಲಿ ಕಾಮಗಾರಿ ನಿರ್ಮಿಸಲು ರೈತರು ಒಪ್ಪದೆ, ಭೂ–ಪರಿಹಾರ ತೆಗೆದುಕೊಳ್ಳದೆ ನಿರಾಕರಿಸಿರುತ್ತಾರೆ.<br><br>ಸಂಬಂಧಪಟ್ಟ ಸಹಾಯಕ ಆಯುಕ್ತರು, ತಹಶೀಲ್ದಾರವರು ಮತ್ತು ಪೊಲೀಸ್ ಇಲಾಖೆಯವರ ಸಮ್ಮುಖದಲ್ಲಿ ರೈತರ ಮನವೊಲಿಸಲಾಗಿ, ರೈತರು ಡೆಲಿವರಿ ಛೇಂಬರ್ ನಿರ್ಮಿಸಲು ಒಪ್ಪಿಗೆ ನೀಡಿರುತ್ತಾರೆ. ಅದರಂತೆ ಡೆಲಿವರಿ ಛೇಂಬರ್ ನಿರ್ಮಿಸಲಾಗಿದ್ದು, ಪೈಪ್ ಲೈನ್ ಜೋಡಣೆ ಕಾಮಗಾರಿಯು ಬಾಕಿ ಇದ್ದು ಪ್ರಸ್ತುತ ಜಮೀನಿನಲ್ಲಿ ಬೆಳೆ ಇರುವದರಿಂದ ಜೋಡಣೆ ಕಾಮಗಾರಿಯು ವಿಳಂಬವಾಗಿರುತ್ತದೆ.<br>ಮುಂಬರುವ ವರ್ಷದಿಂದ ರೈತರಿಗೆ ನೀರಾವರಿ ಸೌಲಭ್ಯ ಕಲ್ಪಿಸಲು ಕ್ರಮ ಕೈಗೊಳ್ಳಲಾಗುವುದು. |
| ಈ | ಕಾಮಗಾರಿಯನ್ನು ಪೂರ್ಣಗೊಳಿಸಿ ರೈತರಿಗೆ ಅನುಕೂಲ ಮಾಡಿ ಕೊಡಲು ಸರ್ಕಾರ ಯಾವ ಕ್ರಮ ಕೈಗೊಳ್ಳಲಿದೆ? (ಸಂಪೂರ್ಣ ವಿವರಗಳನ್ನು ನೀಡುವುದು) | |

ಸಂಖ್ಯೆ:ಎಂಐಡಿ 185 ಎಲ್ಎಕ್ಯೂ 2021

(ಜೆ.ಸಿ.ಮಾಧುಸ್ವಾಮಿ)
ಸಣ್ಣ ನೀರಾವರಿ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2280
ಸದಸ್ಯರ ಹೆಸರು : ಶ್ರೀ ಬಸವನಗೌಡ ದದ್ದಲ (ರಾಯಚೂರು ಗ್ರಾಮಾಂತರ)
ಉತ್ತರಿಸುವ ದಿನಾಂಕ : 23.03.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಯಚೂರು ಗ್ರಾಮೀಣ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ತುಂಗಭದ್ರಾ ನದಿಯಿಂದ ಗುಂಜಳ್ಳಿ ಕೆರೆ ಮತ್ತು ಸುತ್ತಮುತ್ತಲಿನ ಕೆರೆಗಳಿಗೆ ನೀರು ತುಂಬಿಸುವ ಯೋಜನೆಯು 2019-20ನೇ ಸಾಲಿನ ಆಯವ್ಯಯದಲ್ಲಿ ಘೋಷಣೆಯಾಗಿದ್ದು, ಸದರಿ ಯೋಜನೆಯು ಪ್ರಸ್ತುತ ಯಾವ ಹಂತದಲ್ಲಿದೆ; (ಸಂಪೂರ್ಣ ವಿವರವನ್ನು ನೀಡುವುದು) | ರಾಯಚೂರು ತಾಲ್ಲೂಕು ಗುಂಜಳ್ಳಿ ಗ್ರಾಮದ ವಡ್ಡಗೇರಿ ಬಸಪ್ಪ ಕೆರೆಯನ್ನು ತುಂಗಭದ್ರಾ ನದಿಯಿಂದ ನೀರು ತುಂಬಿಸುವ ಯೋಜನೆಯ ವಿವರವಾದ ಯೋಜನಾ ವರದಿಯ ರೂ.129.50 ಕೋಟಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿ, ಇಲಾಖೆಯಡಿ ಅನುಮೋದನೆ ಗೊಂಡಿರುವ ಕಾಮಗಾರಿಗಳ ಅಧಿಕ ಕಾರ್ಯಭಾರದ ಹಿನ್ನೆಲೆಯಲ್ಲಿ ಪ್ರಸ್ತಾಪಿತ ಕಾಮಗಾರಿಯನ್ನು ಕೈಬಿಡುವಂತೆ ಅಥವಾ ಮುಂದೂಡುವಂತೆ ಆರ್ಥಿಕ ಇಲಾಖೆಯು ತಿಳಿಸಿದೆ. |
| ಆ) | ಸದರಿ ಯೋಜನೆಯನ್ನು ಕೈಗೆತ್ತಿಕೊಳ್ಳುವ ಇಚ್ಛಾಶಕ್ತಿ ಸರ್ಕಾರಕ್ಕೆ ಇದೆಯೇ; | |
| ಇ) | 2019-20ನೇ ಸಾಲಿನಲ್ಲಿ ಸದರಿ ಕಾಮಗಾರಿಗೆ ಎಷ್ಟು ಅನುದಾನವನ್ನು ಮೀಸಲಿರಿಸಲಾಗಿತ್ತು; ಅದರಲ್ಲಿ ಎಷ್ಟು ಹಣ ಬಳಕೆಯಾಗಿದೆ; ಮೀಸಲಿರಿಸದಿದ್ದಲ್ಲಿ, ಸದರಿ ಯೋಜನೆಗೆ ಯಾವ ವರ್ಷದಲ್ಲಿ ಹಣ ಮೀಸಲಿಡಲಾಗುವುದು ಮತ್ತು ಕಾಮಗಾರಿಯನ್ನು ಪ್ರಾರಂಭಿಸಲಾಗುವುದು? (ಸಂಪೂರ್ಣ ವಿವರವನ್ನು ನೀಡುವುದ) | ಮುಂಬರುವ ವರ್ಷಗಳಲ್ಲಿ ಅನುದಾನದ ಲಭ್ಯತೆಗನುಗುಣವಾಗಿ ಸದರಿ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲು ಪರಿಶೀಲಿಸಲಾಗುತ್ತಿದೆ. |

ಸಂಖ್ಯೆ:ಜಸಂಇ 78 ಎಂಎಲ್ಎ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2282 |
| ಸದಸ್ಯರ ಹೆಸರು | : | ಶ್ರೀ ಬಸವನಗೌಡ ದದ್ದಲ (ರಾಯಚೂರು ಗ್ರಾಮಾಂತರ) |
| ಉತ್ತರಿಸಬೇಕಾದ ದಿನಾಂಕ | : | 23.03.2021 |
| ಉತ್ತರಿಸುವ ಸಚಿವರು | : | ಮಾನ್ಯ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಲ್ಯಾಣ ಕರ್ನಾಟಕ ಅಭಿವೃದ್ಧಿ ಮಂಡಳಿ ಅಡಿಯಲ್ಲಿ ಅನುದಾನವನ್ನು ಯಾವ ಮಾನದಂಡಗಳ ಅನ್ವಯ ಹಂಚಿಕೆ ಮಾಡಲಾಗುತ್ತದೆ; ತಾಲ್ಲೂಕುವಾರು ಅಥವಾ ವಿಧಾನಸಭಾ ಕ್ಷೇತ್ರವಾರು ಹಂಚಿಕೆ ಮಾಡಲಾಗುವುದೇ; (ಸಂಪೂರ್ಣ ವಿವರವನ್ನು ನೀಡುವುದು) | ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯಡಿ ಡಾ॥ ಡಿ.ಎಂ.ನಂಜುಂಡಪ್ಪ ವರದಿಯನುಸಾರ ತಾಲ್ಲೂಕು ದುಸ್ಥಿತಿ ಸೂಚ್ಯಾಂಕದ ಪ್ರಕಾರ ಅನುದಾನವನ್ನು ಹಂಚಿಕೆ ಮಾಡಲಾಗುವುದು.<br>ತಾಲ್ಲೂಕವನ್ನು ಒಂದು ಘಟಕವನ್ನಾಗಿ ಪರಿಗಣಿಸಿ ಮೈಕ್ರೋ ಯೋಜನೆಯಡಿ ತಾಲ್ಲೂಕುವಾರು ಅನುದಾನವನ್ನು ಹಂಚಿಕೆ ಹಾಗೂ ಮ್ಯಾಕ್ರೋ ಯೋಜನೆಯಡಿಯಲ್ಲಿ ಜಿಲ್ಲಾವಾರು ಅನುದಾನ ಹಂಚಿಕೆ ಮಾಡಲಾಗತ್ತಿದೆ. |
| ಆ) | ಕೆಲವೊಂದು ವಿಧಾನಸಭಾ ಕ್ಷೇತ್ರಗಳು ಒಂದೇ ತಾಲ್ಲೂಕಿನಡಿ ಬರುವುದರಿಂದ ಅತಿ ಕಡಿಮೆ ಅನುದಾನ ಹಂಚಿಕೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | -ಬಂದಿದೆ- |
| ಇ) | ಬಂದಿದ್ದಲ್ಲಿ ಈ ತಾರತಮ್ಯ ಸರಿಪಡಿಸಲು ಸರ್ಕಾರ ಯಾವ ಕ್ರಮ ಕೈಗೊಳ್ಳುತ್ತದೆ? (ಸಂಪೂರ್ಣ ವಿವರ ನೀಡುವುದು) | ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯಡಿ ಡಾ॥ ಡಿ.ಎಂ.ನಂಜುಂಡಪ್ಪ ವರದಿಯನುಸಾರ ತಾಲ್ಲೂಕು ದುಸ್ಥಿತಿ ಸೂಚ್ಯಾಂಕ ಪ್ರಕಾರ ಅನುದಾನವನ್ನು ಹಂಚಿಕೆ ಮಾಡಲಾಗುತ್ತಿದ್ದು, ಸದರಿ ವರದಿಯು 19 ವರ್ಷಗಳ ಹಳೆಯದಾಗಿರುವುದರಿಂದ ಹೊಸದಾಗಿ ತಾಲ್ಲೂಕು ದುಸ್ಥಿತಿ ಸೂಚ್ಯಾಂಕವನ್ನು ಕಂಡು ಹಿಡಿಯಲು ಉದ್ದೇಶಿಸಲಾಗಿದೆ. |

**ಪಿಡಿಎಸ್ 30 ಹೆಚ್‌ಕೆಡಿ 2021**

(ಡಾ॥ ನಾರಾಯಣಗೌಡ)
ಸಚಿವರು,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 2283

**ಸದಸ್ಯರ ಹೆಸರು** : ಶ್ರೀ ಬಸವನಗೌಡ ದದ್ದಲ (ರಾಯಚೂರು ಗ್ರಾಮಾಂತರ)

**ಉತ್ತರಿಸಬೇಕಾದ ದಿನಾಂಕ** : 23.03.2021

**ಉತ್ತರಿಸುವ ಸಚಿವರು** : ಮಾನ್ಯ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ನಂಜುಂಡಪ್ಪ ವರದಿಯನ್ವಯ ವಿವಿಧ ಯೋಜನೆಯಡಿ ಅನುದಾನವನ್ನು ತಾಲ್ಲೂಕುವಾರು ಅಥವಾ ವಿಧಾನಸಭಾ ಕ್ಷೇತ್ರಾವರು ಹಂಚಿಕೆ ಮಾಡಲಾಗುವುದೇ; (ಸಂಪೂರ್ಣ ವಿವರ ನೀಡುವುದು) | ನಂಜುಂಡಪ್ಪ ವರದಿಯನ್ವಯ ಅನುದಾನವನ್ನು ತಾಲ್ಲೂಕುವಾರು ಹಂಚಿಕೆ ಮಾಡಲಾಗುತ್ತಿದೆ. ಕ್ಷೇತ್ರವಾರು ಹಂಚಿಕೆ ಮಾಡಲಾಗುವುದಿಲ್ಲ. ಅನುದಾನ ಹಂಚಿಕೆ ವಿಧಾನವು ನಂಜುಂಡಪ್ಪ ವರದಿಯಲ್ಲಿ ಸೂಚಿಸಿರುವ ತಾಲ್ಲೂಕು ದುಸ್ಥಿತಿ ಸೂಚ್ಯಾಂಕಕ್ಕೆ ಅನುಗುಣವಾಗಿ ಮಾಡಲಾಗುತ್ತಿದೆ. ನಂಜುಂಡಪ್ಪ ವರದಿಯನ್ವಯ ಕಲಬುರಗಿ ವಿಭಾಗಕ್ಕೆ ಶೇಕಡ 40%ರಷ್ಟು, ಬೆಳಗಾವಿ ವಿಭಾಗಕ್ಕೆ ಶೇಕಡ 20%ರಷ್ಟು ಬೆಂಗಳೂರು ವಿಭಾಗಕ್ಕೆ 25% ರಷ್ಟು ಮತ್ತು ಮೈಸೂರು ವಿಭಾಗಕ್ಕೆ ಶೇಕಡ 15%ರಷ್ಟು ಹಂಚಿಕೆ ಮಾಡಲಾಗುತ್ತಿದೆ. |
| ಆ) | ರಾಜ್ಯದಲ್ಲಿ ಎರಡನೇ ಅತಿ ದೊಡ್ಡ ವಿಧಾನಸಭಾ ಕ್ಷೇತ್ರವಾಗಿರುವ ರಾಯಚೂರು ಗ್ರಾಮೀಣ ವಿಧಾನಸಭಾ ಕ್ಷೇತ್ರಕ್ಕೆ ಅತಿ ಕಡಿಮೆ ಅನುದಾನ ಹಂಚಿಕೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | -ಬಂದಿದೆ- |
| ಇ) | ಈ ತಾರತಮ್ಯವನ್ನು ಸರಿದೂಗಿಸಲು ಸರ್ಕಾರವು ಪ್ರಸ್ತುತ ಯಾವ ಕ್ರಮ ಕೈಗೊಂಡಿದೆ; ಕೈಗೊಳ್ಳದಿದ್ದಲ್ಲಿ, ಮುಂದಿನ ದಿನಗಳಲ್ಲಿ ಯಾವ ಕ್ರಮ ಕೈಗೊಳ್ಳಲಾಗುವುದು? (ಸಂಪೂರ್ಣ ವಿವರವನ್ನು ನೀಡುವುದು) | ನಂಜುಂಡಪ್ಪ ವರದಿಯು ಸೂಮಾರು 20 ವರ್ಷಗಳಷ್ಟು ಹಳೆಯದಾಗಿದ್ದು, ಹೊಸ ಮಾನದಂಡಗಳನ್ನೂ ನಿಗದಿ ಪಡಿಸಲು ಸರ್ಕಾರದ ಪರಿಶೀಲನೆಯಲ್ಲಿ ಇದೆ. |

**ಪಿಡಿಎಸ್ 15 ಎಸ್‌ಡಿಪಿ 2021**

(ಡಾ॥ ನಾರಾಯಣಗೌಡ)
ಸಚಿವರು,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3276
2. ಸದಸ್ಯರ ಹೆಸರು : ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ
3. ಉತ್ತರಿಸಬೇಕಾದ ದಿನಾಂಕ : 23-03-2021

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಕೊಡಗು ಜಿಲ್ಲೆಯಲ್ಲಿ ಕಳೆದ ಮೂರು ವರ್ಷಗಳಿಂದ ಹೇಮಾವತಿ ಹಿನ್ನೀರಿನಿಂದ ಪುನರ್ವಸತಿ ಪಡೆದಿರುವ ರೈತರ ಮೂಲಭೂತ ಸೌಲಭ್ಯಕ್ಕಾಗಿ ಸರ್ಕಾರ ಎಷ್ಟು ಅನುದಾನ ಬಿಡುಗಡೆಗೊಳಿಸಿದೆ? | ಹೇಮಾವತಿ ಜಲಾಶಯದ ಹಿನ್ನೀರಿನಿಂದ ಕೊಡಗು ಜಿಲ್ಲೆ ಸೋಮವಾರಪೇಟೆ ತಾಲ್ಲೂಕಿನ ಕೊಡ್ಲಿಪೇಟೆ ಹೋಬಳಿಯ ಗ್ರಾಮದ ರೈತರ ಜಮೀನುಗಳು ಮುಳುಗಡೆಯಾಗಿದ್ದು, ಸದರಿ ಪುನರ್ವಸತಿ ಗ್ರಾಮಗಳಲ್ಲಿ ಕೈಗೊಂಡಿರುವ ಮೂಲಭೂತ ಸೌಕರ್ಯ ಕಲ್ಪಿಸುವ ಕಾಮಗಾರಿಗಳಿಗೆ ಕಳೆದ ಮೂರು ವರ್ಷಗಳಿಂದ ಬಿಡುಗಡೆ ಮಾಡಲಾಗಿರುವ ಅನುದಾನ ವಿವರ ಕೆಳಕಂಡಂತಿದೆ: |

*(ರೂ. ಕೋಟಿಗಳಲ್ಲಿ)*

| ಕ್ರ. ಸಂ | ವರ್ಷ | ಬಿಡುಗಡೆ ಮಾಡಿದ ಅನುದಾನ |
|---|---|---|
| 1 | 2017–18 | 3.65 |
| 2 | 2018–19 | 4.05 |
| 3 | 2019–20 | 3.32 |
| | ಒಟ್ಟು :– | 11.02 |

*ಸಂಖ್ಯೆ:ಜಸಂಇ 82 ಎನ್‌ಎಲ್‌ಎ 2021*

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3279
ಸದಸ್ಯರ ಹೆಸರು : ಶ್ರೀಮತಿ ರೂಪಾಲಿ ಸಂತೋಷ್ ನಾಯ್ಕ್ (ಕಾರವಾರ)
ಉತ್ತರಿಸುವ ದಿನಾಂಕ : 23.03.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಜಲಸಂಪನ್ಮೂಲ ಇಲಾಖೆಯಿಂದ ಕಾರವಾರ ಮತಕ್ಷೇತ್ರದ ರೈತರ ಭೂಮಿಗಳಿಗೆ ನೀರು ಉಣಿಸಲು ಕೆರೆ ತುಂಬಿಸುವ ಯೋಜನೆಗೆ ಪ್ರಸ್ತಾವನೆ ಸಲ್ಲಿಸಿದ್ದು, ಡಿ.ಪಿ.ಆರ್ ತಯಾರಿಸಲು ಅನುಮೋದನೆ ನೀಡಿದ್ದು, ಯಾವಾಗ ಡಿ.ಪಿ.ಆರ್. ಪೂರ್ಣಗೊಳಿಸಲಾಗುವುದು; | ಉತ್ತರ ಕನ್ನಡ ಜಿಲ್ಲೆ, ಕಾರವಾರ ವಿಧಾನಸಭಾ ಕ್ಷೇತ್ರದಡಿ ಬರುವ ಕಾರವಾರ ಮತ್ತು ಅಂಕೋಲ ತಾಲ್ಲೂಕಿನಡಿ ಹೆಚ್ಚಿನ ಗ್ರಾಮಗಳಲ್ಲಿ ಉಪ್ಪು ನೀರಿನ ಸಮಸ್ಯೆಗಳಿಂದ ಕೃಷಿ ಚಟುವಟಿಕೆಗೆ ಹಾಗೂ ಕುಡಿಯುವ ನೀರಿಗೆ ಅಭಾವ ಉಂಟಾಗಿರುತ್ತದೆ. |
| ಆ | ರೈತರಿಗೆ ಮತ್ತು ಜನರಿಗೆ ಅತೀ ಅವಶ್ಯಕವಾಗಿರುವ ಈ ವಿಸ್ತೃತ ಯೋಜನೆಯನ್ನು ಬೋರ್ಡ್‌ನಲ್ಲಿ ಇರಿಸಿ, ಸದರಿ ಪ್ರಸ್ತಾವನೆಗೆ ಯಾವಾಗ ಮಂಜೂರಾತಿ ನೀಡಲಾಗುವುದು? (ಸಂಪೂರ್ಣ ವಿವರ ನೀಡುವುದು) | ಈ ಅಭಾವ ಸರಿದೂಗಿಸಲು, ಸದರಿ ಪ್ರದೇಶಗಳಲ್ಲಿ ಹರಿಯುವ ಕಾಳಿ ಮತ್ತು ಗಂಗಾವಳಿ ನದಿ ಪಾತ್ರಗಳ ಆಯ್ದ ಸ್ಥಳಗಳಲ್ಲಿ ಉಪ್ಪು ನೀರು ತಡೆಗೋಡೆ ಅಣೆಕಟ್ಟು ಹಾಗೂ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಿಸಿ, ಇವುಗಳಲ್ಲಿ ಸಂಗ್ರಹಿಸಿದ ನೀರನ್ನು ಏತ ನೀರಾವರಿ ಮೂಲಕ ಸುತ್ತಮುತ್ತಲಿನ ಪ್ರದೇಶಗಳಿಗೆ ನೀರಾವರಿ ಸೌಲಭ್ಯ ಒದಗಿಸುವ ಕಾಳಿ ಏತ ನೀರಾವರಿ ಯೋಜನೆಯ ಕಾರ್ಯಸಾಧ್ಯತಾ ವರದಿಯು ನಿಗಮದಲ್ಲಿ ತಯಾರಿಕಾ ಹಂತದಲ್ಲಿರುತ್ತದೆ. |

ಸಂಖ್ಯೆ:ಜಸಂಇ 89 ಎಂಎಲ್ಎ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3283 |
| ಸದಸ್ಯರ ಹೆಸರು | : | ಶ್ರೀ ಭೀಮಾ ನಾಯ್ಕ ಎಸ್. (ಹಗರಿಬೊಮ್ಮನಹಳ್ಳಿ) |
| ಉತ್ತರಿಸುವ ದಿನಾಂಕ | : | 23.03.2021 |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹಗರಿಬೊಮ್ಮನಹಳ್ಳಿ ವಿಧಾನಸಭಾ ಕ್ಷೇತ್ರದಲ್ಲಿ 10 ಕೆರೆಗಳಿಗೆ ನೀರು ತುಂಬಿಸುವ ಯೋಜನೆಗೆ ಸರ್ಕಾರ ಅನುದಾನ ಮೀಸಲಿಟ್ಟ ವಿಷಯವು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹಗರಿಬೊಮ್ಮನಹಳ್ಳಿ ವಿಧಾನಸಭಾ ಕ್ಷೇತ್ರದಲ್ಲಿ ರೂ.85.00 ಕೋಟಿ ವೆಚ್ಚದಲ್ಲಿ ತುಂಗಭದ್ರಾ ಜಲಾಶಯದ ಹಿನ್ನೀರಿನಿಂದ ನೀರನ್ನು ಎತ್ತಿ ಕೊಟ್ಟೂರು ಮತ್ತು ಇತರೆ 11 ಕೆರೆಗಳನ್ನು ತುಂಬಿಸುವ ಯೋಜನೆಯನ್ನು ಕೈಗೆತ್ತಿಕೊಳ್ಳುವ ಕುರಿತು 2019-20ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಪ್ರಸ್ತಾಪಿಸಲಾಗಿರುತ್ತದೆ.<br><br>ಆದರೆ ಸದರಿ ಯೋಜನೆಗೆ ಅನುದಾನವನ್ನು ಮೀಸಲಿಟ್ಟಿರುವುದಿಲ್ಲ. |
| ಆ) | ಬಂದಿದ್ದಲ್ಲಿ, ಯೋಜನೆಯನ್ನು ಪರಿಷ್ಕರಿಸಿ 17 ಕೆರೆಗಳಿಗೆ ನೀರು ತುಂಬಿಸುವ ಯೋಜನೆಗೆ ರೂ.379.00 ಕೋಟಿ ಮೊತ್ತದ ಯೋಜನಾ ವರದಿಯೊಂದಿಗೆ ಪ್ರಸ್ತಾವನೆ ಸರ್ಕಾರಕ್ಕೆ ಸಲ್ಲಿಸಲಾಗಿದ್ದು, ಈ ಪ್ರಸ್ತಾವನೆಯು ಪ್ರಸ್ತುತ ಯಾವ ಹಂತದಲ್ಲಿದೆ; | ಸದರಿ ಯೋಜನೆಯ ಕುರಿತು ನೀರಿನ ಲಭ್ಯತೆ ಮತ್ತು ತಾಂತ್ರಿಕ ಸಾಧ್ಯಾ ಸಾಧ್ಯತೆ ಬಗ್ಗೆ ನಿಗಮದ ಹಂತದಲ್ಲಿ ಪರಿಶೀಲನೆಯಲ್ಲಿದೆ. |
| ಇ) | ಈ ಯೋಜನೆಯನ್ನು ಯಾವಾಗ ಜಾರಿ ಮಾಡಲಾಗುವುದು? | |

ಸಂಖ್ಯೆ:ಜಸಂಇ 80 ಎಂಎಲ್ಎ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3285 |
| ಸದಸ್ಯರ ಹೆಸರು | : | ಶ್ರೀ ಗಣೇಶ್ ಜೆ.ಎನ್. (ಕಂಪ್ಲಿ) |
| ಉತ್ತರಿಸಬೇಕಾದ ದಿನಾಂಕ | : | 23.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ರೈತರಿಗೆ ಉಚಿತವಾಗಿ ನೀಡುತ್ತಿರುವ 7 ಗಂಟೆ ವಿದ್ಯುತ್‌ನ್ನು 12 ಗಂಟೆಗೆ ಹೆಚ್ಚಿಸುವ ಪ್ರಸ್ತಾವನೆಯನ್ನು ಸರ್ಕಾರದ ಮುಂದಿದೆಯೇ; | ಪ್ರಸ್ತುತ, ಸರ್ಕಾರದ ಆದೇಶದಂತೆ ರೈತರ ನೀರಾವರಿ ಪಂಪ್‌ಸೆಟ್‌ಗಳಿಗೆ ದಿನವಹಿ 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್‌ನ್ನು ಸರಬರಾಜು ಮಾಡಲಾಗುತ್ತಿದೆ. |
| ಆ) | ಹಾಗಿದ್ದಲ್ಲಿ, ಯಾವಾಗ ರೈತರಿಗೆ 12 ಗಂಟೆ ವಿದ್ಯುತ್‌ನ್ನು ಪೂರೈಸಲಾಗುವುದು? (ಪೂರ್ತಿ ವಿವರ ನೀಡುವುದು) | ತಾಂತ್ರಿಕ ಸಾಧ್ಯತೆ ಇರುವ ಕೃಷಿ ಪಂಪ್‌ಸೆಟ್‌ಗಳ ಫೀಡರ್‌ಗಳಿಗೆ ಹಗಲಿನ ವೇಳೆಯಲ್ಲಿಯೇ ನಿರಂತರ 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್‌ನ್ನು ಸರಬರಾಜು ಮಾಡಲಾಗುತ್ತಿದೆ.<br><br>ರೈತರ ನೀರಾವರಿ ಪಂಪ್‌ಸೆಟ್‌ಗಳಿಗೆ 12 ಗಂಟೆಗಳ ಕಾಲ 3 ಫೇಸ್ ವಿದ್ಯುತ್ ಸರಬರಾಜು ಮಾಡುವ ಬಗ್ಗೆ ಸರ್ಕಾರದಲ್ಲಿ ಪ್ರಸ್ತಾವನೆ ಇರುವುದಿಲ್ಲ. |

**ಸಂಖ್ಯೆ: ಎನರ್ಜಿ 110 ಪಿಪಿಎಂ 2021**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3286
2. ಸದಸ್ಯರ ಹೆಸರು : ಶ್ರೀ ಅಮರೇಗೌಡ ಲಿಂಗನಗೌಡ ಪಾಟೀಲ್ ಬಯ್ಯಾಪುರ್ (ಕುಷ್ಟಗಿ)
3. ಉತ್ತರಿಸಬೇಕಾದ ದಿನಾಂಕ : 23-03-2021
4. ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಯವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ | ಕೋವಿಡ್-19 ಹಿನ್ನೆಲೆಯಲ್ಲಿ ಗುತ್ತಿಗೆದಾರರಿಂದ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಠೇವಣಿ ಪಡೆಯುವುದರಿಂದ ರಿಯಾಯಿತಿ ನೀಡುವ ಕುರಿತು ಸರ್ಕಾರ ಆದೇಶ ಹೊರಡಿಸಿದೆಯೇ; | ಹೌದು.<br>ಸರ್ಕಾರದ ಆದೇಶ ಸಂ:ಆಇ 360 ವೆಚ್ಚ-12/2020 (ಇ-ಆಫೀಸ್), ಬೆಂಗಳೂರು, ದಿನಾಂಕ:13.07.2020 ರಲ್ಲಿ ರಿಯಾಯಿತಿ ನೀಡಿ ಆದೇಶ ಹೊರಡಿಸಲಾಗಿರುತ್ತದೆ. |
| ಆ | ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟೆಂಡರ್ ಪ್ರಕ್ರಿಯೆಯಲ್ಲಿ ಪಾಲನೆ ಮಾಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ. |
| ಇ | ಬಂದಿದ್ದಲ್ಲಿ, ಸದರಿ ಆದೇಶವನ್ನು ಪೂರ್ಣ ಪ್ರಮಾಣದಲ್ಲಿ ಅನುಷ್ಠಾನ ಮಾಡಲು ಸರ್ಕಾರ ಕೈಗೊಂಡ ಕ್ರಮವೇನು:- | ಉದ್ಭವಿಸುವುದಿಲ್ಲ. |
| ಈ | ಇಲಾಖೆಯ ಕೆಳ ಹಂತದಲ್ಲಿ ಸದರಿ ಆದೇಶವನ್ನು ಪಾಲನೆ ಮಾಡದೇ ಇರುವುದರಿಂದ, ಸರ್ಕಾರದ ಉದ್ದೇಶಕ್ಕೆ ಹಿನ್ನಡೆಯಾಗುವುದಿಲ್ಲವೇ; | ಇಲಾಖೆಯ ಕೆಳಹಂತದಲ್ಲಿ ಸರ್ಕಾರದ ಆದೇಶವನ್ನು ಪಾಲನೆ ಮಾಡಬೇಕಾಗುತ್ತದೆ. |
| ಉ | ಹಾಗಿದ್ದಲ್ಲಿ, ಆದೇಶ ಪಾಲನೆ ಮಾಡದೇ ಇರುವ ಅಧಿಕಾರಿಗಳ ವಿರುದ್ಧ ಯಾವ ಕ್ರಮ ಜರುಗಿಸಲಾಗಿದೆ? | ಇಂತಹ ಪ್ರಕರಣಗಳು ಕಂಡುಬಂದಲ್ಲಿ ನಿಯಮಾನುಸಾರ ಸೂಕ್ತ ಕ್ರಮ ಜರುಗಿಸಲು ಕೆ.ಟಿ.ಪಿ.ಪಿ ಕಾಯಿದೆ, ಕಲಂ 2(ಡಿ) ರಡಿ ವ್ಯಾಖ್ಯಾನಿಸಿದ ಸಂಗ್ರಹಣಾ ಪ್ರಾಧಿಕಾರಕ್ಕೆ ನಿರ್ದೇಶನ ನೀಡಲಾಗುವುದು. |

ಕಡತ ಸಂ:ಆಇ 21 ವೆಚ್ಚ-12/2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

<u>ಕರ್ನಾಟಕ ವಿಧಾನ ಸಭೆ</u>

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3290 |
| 2 | ಸದಸ್ಯರ ಹೆಸರು | : | ಶ್ರೀ ಅಮರೇಗೌಡ ಲಿಂಗನಗೌಡ ಪಾಟೀಲ್ ಬಯ್ಯಾಪುರ್ |
| 3 | ಉತ್ತರಿಸಬೇಕಾದ ದಿನಾಂಕ | : | 23.03.2021. |
| 4 | ಉತ್ತರಿಸುವವರು | : | ಸಣ್ಣ ನೀರಾವರಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ತಾವರಗೇರಾ ಪಟ್ಟಣಕ್ಕೆ ತುಂಗಭದ್ರಾ ನದಿಯ ಮೂಲಕ ಶಾಶ್ವತ ಕುಡಿಯುವ ನೀರಿನ ಯೋಜನೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಇವರ ಮೂಲಕ ಅನುಷ್ಠಾನಗೊಳಿಸುವ ಪ್ರಸ್ತಾವನೆಯು ಸರ್ಕಾರದ ಗಮನಕ್ಕೆ ಬಂದಿದೆಯೇ; | ಗಮನಕ್ಕೆ ಬಂದಿದೆ. |
| ಆ) | ಸದರಿ ಯೋಜನೆಗಾಗಿ ಸಣ್ಣ ನೀರಾವರಿ ಇಲಾಖೆಯ ಮುರ ಕೆರೆಯ ಹತ್ತಿರ ಲಭ್ಯವಿರುವ ಸುಮಾರು 600 ಎಕರೆ ಜಮೀನಿನ ಪೈಕಿ, 100 ಎಕರೆ ಜಮೀನನ್ನು ಜಲ ಸಂಗ್ರಹಾಗಾರ (ಖಜಜಡಿತಿಉಡಿ) ನಿರ್ಮಾಣ ಮಾಡಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಗೆ ಬಿಟ್ಟುಕೊಡುವ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿದೆಯೇ; | ಕೊಪ್ಪಳ ಜಿಲ್ಲೆ ಕುಷ್ಟಗಿ ತಾಲ್ಲೂಕಿನ ತಾವರಗೇರಾ ಪಟ್ಟಣಕ್ಕೆ ಕುಡಿಯುವ ನೀರು ಸರಬರಾಜಿಗಾಗಿ ತುರವಿಹಳ್ಳ ಹತ್ತಿರ ತುಂಗಭದ್ರಾ ಎಡದಂಡೆ ಕಾಲುವೆ ಮೂಲದಿಂದ ಕುಡಿಯುವ ನೀರು ಸರಬರಾಜು ವ್ಯವಸ್ಥೆ ಒದಗಿಸುವ ಯೋಜನೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಇವರು ಅನುಷ್ಠಾನಗೊಳಿಸುತ್ತಿರುತ್ತಾರೆ.<br><br>ಸದರಿ ಯೋಜನೆ ಅಡಿ ನಿರ್ಮಿಸಲು ಉದ್ದೇಶಿಸಿರುವ ಜಲಸಂಗ್ರಹಾಗಾರ ಕೆರೆ ನಿರ್ಮಾಣಕ್ಕಾಗಿ ಅವಶ್ಯವಿರುವ 150-00 ಎಕರೆ ಜಮೀನನ್ನು ಕುಷ್ಟಗಿ ತಾಲ್ಲೂಕಿನ ಮುರ ಗ್ರಾಮದ ಹತ್ತಿರ 673 ಎಕರೆ 35 ಗುಂಟೆ ಜಮೀನಿನಲ್ಲಿ ಸಣ್ಣ ನೀರಾವರಿ ಇಲಾಖೆಯಿಂದ ನಿರ್ಮಿಸಲಾದ ಕೆರೆಯ ಒಂದು ಭಾಗದಲ್ಲಿ ನೀಡಿದಲ್ಲಿ, ಭೂಸ್ವಾಧೀನ ಪ್ರಕ್ರಿಯೆಯಿಂದ ಯೋಜನೆ ಅನುಷ್ಠಾನದಲ್ಲಿ ಉಂಟಾಗುವ ವಿಳಂಬ ಮತ್ತು ಭೂಸ್ವಾಧೀನ ವೆಚ್ಚದ ಹೊರೆ ತಪ್ಪಿಸಬಹುದಾಗಿರುತ್ತದೆಂದು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಪ್ರಸ್ತಾವನೆ ಸಲ್ಲಿಸಿರುತ್ತದೆ.<br><br>ಮುರ ಕೆರೆಯ ಶೇಖರಣಾ ಸಾಮರ್ಥ್ಯ 144.25 ಎಂ.ಸಿ.ಎಫ್.ಟಿ ಇದ್ದು ಹಾಗೂ ಕೆರೆಯಿಂದ 1335 ಹೆಕ್ಟೇರ್ ಜಮೀನು ನೀರಾವರಿಗೆ ಒಳಪಡುತ್ತದೆ. ಕೊಪ್ಪಳ ಜಿಲ್ಲೆ ಕುಷ್ಟಗಿ ತಾಲ್ಲೂಕಿನಲ್ಲಿ ಕುಡಿಯುವ ನೀರು ಹಾಗೂ ಅಂತರ್ಜಲ ಅಭಿವೃದ್ಧಿ ಸಲುವಾಗಿ ಕೃಷ್ಣಾ ನದಿಯಿಂದ ಏತ ನೀರಾವರಿ ಯೋಜನೆಯ ಮೂಲಕ ಮುರ ಕೆರೆಯನ್ನು ತುಂಬುವ ಕಾಮಗಾರಿಯು ಪ್ರಗತಿಯಲ್ಲಿರುವುದರಿಂದ ಈ ಹಂತದಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಇವರಿಗೆ ಮುರ ಕೆರೆಗಾಗಿ ಭೂಸ್ವಾಧೀನಪಡಿಸಿಕೊಂಡ ಒಟ್ಟು ಕ್ಷೇತ್ರ 673 ಎಕರೆ 34 ಗುಂಟೆ ಜಮೀನುಗಳ ಪೈಕಿ 150 ಎಕರೆ ಜಮೀನನ್ನು ಹಸ್ತಾಂತರಿಸುವುದು ಸೂಕ್ತವಾಗುವುದಿಲ್ಲ. |
| ಇ) | ಜಮೀನು ಹಸ್ತಾಂತರ ಪ್ರಕ್ರಿಯೆಯು ಪ್ರಸ್ತುತ ಯಾವ ಹಂತದಲ್ಲಿದೆ; ಹಸ್ತಾಂತರ ಪ್ರಕ್ರಿಯೆಯು ವಿಳಂಬವಾಗಲು ಕಾರಣಗಳೇನು? | |

ಕಡತ ಸಂಖ್ಯೆ: ಮನೀಇ 202 ಕ್ಷೇಇ 2021

(ಜೆ.ಸಿ.ಮಾಧುಸ್ವಾಮಿ)
ಸಣ್ಣ ನೀರಾವರಿ ಸಚಿವರು

3೦

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3291 |
| ಸದಸ್ಯರ ಹೆಸರು | : | ಶ್ರೀ ಸುರೇಶ್ ಗೌಡ (ನಾಗಮಂಗಲ) |
| ಉತ್ತರಿಸಬೇಕಾದ ದಿನಾಂಕ | : | 23.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| ಪ್ರಶ್ನೆ | | ಉತ್ತರ |
|---|---|---|
| ಅ) | ರೈತರ ಪಂಪ್‌ಸೆಟ್‌ಗಳಿಗೆ ಪ್ರತಿದಿನ ಎಷ್ಟು ಗಂಟೆಗಳ ಕಾಲ 3 ಫೇಸ್ ವಿದ್ಯುತ್‌ನ್ನು ಸರಬರಾಜು ಮಾಡಲು ಸರ್ಕಾರ ಸಮಯ ನಿಗದಿಪಡಿಸಿದೆ; | ರಾಜ್ಯದ ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಸರ್ಕಾರದ ಆದೇಶದನ್ವಯ ರೈತರ ನೀರಾವರಿ ಪಂಪ್‌ಸೆಟ್‌ಗಳಿಗೆ ದಿನವಹಿ 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್‌ನ್ನು ಸರಬರಾಜು ಮಾಡಲಾಗುತ್ತಿದೆ.<br><br>ತಾಂತ್ರಿಕ ಸಾಧ್ಯತೆ ಇರುವ ಪ್ರದೇಶಗಳಲ್ಲಿ ರೈತರ ನೀರಾವರಿ ಪಂಪ್‌ಸೆಟ್‌ಗಳಿಗೆ ಹಗಲಿನ ವೇಳೆಯಲ್ಲಿ ನಿರಂತರ 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ.<br><br>ತಾಂತ್ರಿಕ ಸಾಧ್ಯತೆ ಇಲ್ಲದಿರುವ ಪ್ರದೇಶಗಳಲ್ಲಿ ರೈತರ ನೀರಾವರಿ ಪಂಪ್‌ಸೆಟ್‌ಗಳಿಗೆ ಹಗಲಿನ ವೇಳೆ 4 ಗಂಟೆಗಳ ಕಾಲ ಹಾಗೂ ರಾತ್ರಿ ವೇಳೆ 3 ಗಂಟೆಗಳ ಕಾಲ ಒಟ್ಟು 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. |
| ಆ) | ನಿಗದಿ ಪಡಿಸಿದ ಸಮಯದಂತೆ ರೈತರಿಗೆ 3–ಫೇಸ್ ವಿದ್ಯುತ್ ನೀಡದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಇ) | ಬಂದಿದ್ದಲ್ಲಿ, ಇದನ್ನು ಸರಿಪಡಿಸಲು ಸರ್ಕಾರ ಯಾವ ಕ್ರಮ ಕೈಗೊಳ್ಳಲಾಗುವುದು? | |

ಸಂಖ್ಯೆ: ಎನರ್ಜಿ 111 ಪಿಪಿಎಂ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3293
ಸದಸ್ಯರ ಹೆಸರು : ಶ್ರೀ ತನ್ವೀರ್ ಸೇಠ್
ಉತ್ತರಿಸಬೇಕಾದ ದಿನಾಂಕ : 23.03.2021
ಉತ್ತರಿಸುವ ಸಚಿವರು : ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಸಂಚಾರಿ ನಿಯಮಗಳ ಉಲ್ಲಂಘನೆಯಿಂದ ಸಂಗ್ರಹಿಸುವ ದಂಡದ ಶೇಕಡ 50 ರಷ್ಟು ಮೊತ್ತವನ್ನು ಬೆಂಗಳೂರು ಮಾದರಿಯಲ್ಲಿ ಮೈಸೂರು ಸಂಚಾರಿ ವ್ಯವಸ್ಥೆಯನ್ನು ಅಭಿವೃದ್ಧಿ ಪಡಿಸಲು ಉಪಯೋಗಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ ; | ಹೌದು. |
| (ಆ) | ಹಾಗಿದ್ದಲ್ಲಿ, ಸದರಿ ಪ್ರಸ್ತಾವನೆಯ ವಿವರಗಳೇನು ? | 2020-21ನೇ ಸಾಲಿನಲ್ಲಿ ಪೊಲೀಸ್ ಆಯುಕ್ತರು, ಮೈಸೂರು ನಗರ ರವರಿಗೆ ಸಂಚಾರ ನಿರ್ವಹಣೆಯ ಆವರ್ತಕ ವೆಚ್ಚಗಳ ಪಾವತಿಗಾಗಿ ರೂ.2,33,00,000/- ಗಳನ್ನು ಮತ್ತು ಸಂಚಾರ ಸುಧಾರಣಾ ಉಪಕರಣ/ಸೇವೆಗಳ ಖರೀದಿಗಾಗಿ ರೂ.45,00,000/- (ಒಟ್ಟು ರೂ.2,78,00,000/-) ಗಳನ್ನು ಬಿಡುಗಡೆ ಮಾಡಲಾಗಿರುತ್ತದೆ.<br>ಮೈಸೂರು ನಗರದ ಸಂಚಾರ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸಲು ಮುಂದಿನ ಆರ್ಥಿಕ ವರ್ಷಗಳಲ್ಲಿಯೂ ಸಹ ಅನುದಾನವನ್ನು ಬಿಡುಗಡೆ ಮಾಡಲು ಕ್ರಮಕೈಗೊಳ್ಳಲಾಗುವುದು. |

**ಹೆಚ್‌ಡಿ 207 ಎಸ್‌ಎಸ್‌ಟಿ 2021**

(ಬಸವರಾಜ ಬೊಮ್ಮಾಯಿ)
ಗೃಹ ಮತ್ತು ಕಾನೂನು, ಸಂಸದೀಯ
ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವರು

**ಕರ್ನಾಟಕ ವಿಧಾನ ಸಭೆ**

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3299
2) ಸದಸ್ಯರ ಹೆಸರು : ಶ್ರೀ ಎಸ್.ಎನ್. ನಾರಾಯಣಸ್ವಾಮಿ ಕೆ.ಎಂ. (ಬಂಗಾರಪೇಟೆ)
3) ಉತ್ತರಿಸುವ ದಿನಾಂಕ: : 23-03-2021
4) ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2019-20 ಮತ್ತು 2020-21ನೇ ಸಾಲಿನ ಪ್ರಸ್ತುತ ಅವಧಿವರೆಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಕ್ಕೆ G.S.T ಯಿಂದ ಸಂಗ್ರಹವಾದ ತೆರಿಗೆಯ ಮೊತ್ತೆವಷ್ಟು; | 2019-20 ಮತ್ತು 2020-21ನೇ ಸಾಲಿನ ಪ್ರಸ್ತುತ ಅವಧಿವರೆಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಕ್ಕೆ G.S.T ಯಿಂದ ಸಂಗ್ರಹವಾದ ಮತ್ತು ಸೆಟ್ಲ್‌ಮೆಂಟಿನಿಂದ ರಾಜ್ಯಕ್ಕೆ ಬಂದ ತೆರಿಗೆಯ ವಿವರ ಈ ಕೆಳಕಂಡಂತೆ ಇರುತ್ತದೆ. |

| ವರ್ಷ | ಒಟ್ಟು ಎಸ್‌ಜಿಎಸ್‌ಟಿ ಮೊತ್ತ (ರೂ.ಕೋಟಿಗಳಲ್ಲಿ) | ಸಂಗ್ರಹವಾದ ತೆರಿಗೆ (ರೂ. ಕೋಟಿಗಳಲ್ಲಿ) | | |
|---|---|---|---|---|
| | | ಸಿಜಿಎಸ್‌ಟಿ | ಐಜಿಎಸ್‌ಟಿ | ಸೆಸ್ |
| 2019-20 | 42184.14 | 19818.76 | 27664.97 | 9445.67 |
| 2020-21 (ಫೆಬ್ರವರಿ-21ರ ಅಂತ್ಯಕ್ಕೆ) | 34463.56 | 16307.36 | 23879.51 | 6697.19 |

ಎಸ್.ಜಿ.ಎಸ್.ಟಿ. ಸಂಗ್ರಹಣೆಯು ರಾಜ್ಯದಲ್ಲಿ ಸಂಗ್ರಹಣೆಯಾಗಿರುವ ನಿವ್ವಳ ಎಸ್‌ಜಿಎಸ್‌ಟಿ ಮೊತ್ತ ಮತ್ತು ರಾಜ್ಯಕ್ಕೆ ಸಂದಾಯವಾಗಿರುವ ಐ.ಜಿ.ಎಸ್.ಟಿ. ಸೆಟ್ಲ್‌ಮೆಂಟ್ ಮೊತ್ತವನ್ನು ಒಳಗೊಂಡಿದ್ದು, ವಿವರಗಳು ಈ ಕೆಳಕಂಡಂತಿರುತ್ತದೆ.

| ವರ್ಷ | ಸಂಗ್ರಹವಾದ ಎಸ್‌ಜಿಎಸ್‌ಟಿ (ರೂ. ಕೋಟಿಗಳಲ್ಲಿ) | ಐ.ಜಿ.ಎಸ್.ಟಿ. ಸೆಟ್ಲ್‌ಮೆಂಟ್ (ರೂ. ಕೋಟಿಗಳಲ್ಲಿ) | ಒಟ್ಟು (ರೂ.ಕೋಟಿಗಳಲ್ಲಿ) |
|---|---|---|---|
| 2019-20 | 26480.43 | 15703.71 | 42184.14 |
| 2020-21 (ಫೆಬ್ರವರಿ-21ರ ಅಂತ್ಯಕ್ಕೆ) | 20858.43 | 13605.13 | 34463.56 |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಆ) | ಕೇಂದ್ರ ಸರ್ಕಾರದಿಂದ ರಾಜ್ಯದ ಪಾಲಿನ ತೆರಿಗೆಯಿಂದ ಬಂದ ಹಣ ಎಷ್ಟು? (ವಿವರ ನೀಡುವುದು) | 2019-20 ಮತ್ತು 2020-21ನೇ ಸಾಲಿಗೆ ಕೇಂದ್ರ ಸರ್ಕಾರದಿಂದ ರಾಜ್ಯದ ಪಾಲಿನ ತೆರಿಗೆಯಿಂದ ಬಂದ ಹಣ : |

| ವರ್ಷ | ಸ್ವೀಕರಿಸಲಾದ ಮೊತ್ತ |
|---|---|
| 2019-20 | ರೂ.20105.89 ಕೋಟಿ (ನಷ್ಟ ಪರಿಹಾರ) |
| 2020-21 (ಫೆಬ್ರವರಿ ಅಂತ್ಯಕ್ಕೆ) | ರೂ.15936.43 ಕೋಟಿ<br>(ರೂ.3553 ಕೋಟಿ - ನಷ್ಟ ಪರಿಹಾರ<br>ರೂ.12393 ಕೋಟಿ - ನಷ್ಟ ಪರಿಹಾರ ಸಾಲ |

ಸಂಖ್ಯೆ: ಆಇ 39 ಸಿಎಸ್ಎಲ್ 2021

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ

## ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3301
2. ಸದಸ್ಯರ ಹೆಸರು : ಶ್ರೀ ಸಿದ್ದು ಸವದಿ (ತೇರದಾಳ)
3. ಉತ್ತರಿಸಬೇಕಾದ ದಿನಾಂಕ : 23.03.2021

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ತೇರದಾಳ ಮತಕ್ಷೇತ್ರದಲ್ಲಿ ಹಿಪ್ಪರಗಿ ಬಾಂದಾರದ ಕೆಳಗಡೆ ಸೇತುವೆ ಮತ್ತು ರಸ್ತೆ ಮಂಜೂರಾತಿ ಆಗಿದೆಯೇ? ಯಾವಾಗ ಮಂಜೂರು ಮಾಡಲಾಗಿದೆ? ಪ್ರಸ್ತುತ ಯಾವ ಹಂತತಲುಪಿದೆ? (ಸಂಪೂರ್ಣ ಮಾಹಿತಿ ನೀಡುವುದು) | ಹಿಪ್ಪರಗಿ ಬಾಂದಾರದ ಕೆಳಗಡೆ ಸೇತುವೆ ಮತ್ತು ರಸ್ತೆ ನಿರ್ಮಾಣದ ಕಾಮಗಾರಿಯ ರೂ.67.54 ಕೋಟಿ ಮೊತ್ತದ ಪ್ರಸ್ತಾವನೆಗೆ ಸರ್ಕಾರದಿಂದ ದಿನಾಂಕ:23/06/2014 ರಲ್ಲಿ ಮಂಜೂರಾತಿ ನೀಡಲಾಗಿರುತ್ತದೆ. ಅದರನ್ವಯ ಸದರಿ ಕಾಮಗಾರಿಯ ಗುತ್ತಿಗೆಯನ್ನು ದಿನಾಂಕ:26/03/2018 ರಂದು ರೂ.60.65 ಕೋಟಿ ಮೊತ್ತಕ್ಕೆ ಗುತ್ತಿಗೆದಾರರಿಗೆ ವಹಿಸಿಕೊಡಲಾಗಿರುತ್ತದೆ.<br><br>ಸದರಿ ಕಾಮಗಾರಿಯಲ್ಲಿ ಇಲ್ಲಿಯವರೆಗೆ ಸೇತುವೆಯ ಪೀಯರ್ ಸಂಖ್ಯೆ 3, 4, 5, & 6ರ ತಳಪಾಯದ ಕಾಂಕ್ರೀಟೀಕರಣ ಪೂರ್ಣಗೊಳಿಸಿದ್ದು, ಪೀಯರ್ ಸಂಖ್ಯೆ 1, 2, 7, 8, 9, 10 & 11 ರ ತಳಪಾಯ ಮಣ್ಣು ಅಗೆತದ ಕಾರ್ಯವು ಪೂರ್ಣಗೊಳಿಸಲಾಗಿದೆ ಹಾಗೂ ಅಥಣಿ ಬದಿಗೆ ಇರುವ ರಸ್ತೆ ನಿರ್ಮಾಣ ಕಾಮಗಾರಿಯ ಉದ್ದವು ಒಟ್ಟು 4.63 ಕಿ.ಮೀ. ಇದ್ದು ಅದರ ಪೈಕಿ 3.03 ಕಿ.ಮೀ. ಸಬ್ ಗ್ರೇಡ್‌ವರೆಗೆ ಕೆಲಸವು ಮುಗಿದಿರುತ್ತದೆ. |
| ಆ) | ಪ್ರಸ್ತುತ ಕಾಮಗಾರಿ ಸಂಪೂರ್ಣ ಸ್ಥಗಿತವಾಗಲು ಕಾರಣವೇನು; ಯಾವಾಗ ಕಾಮಗಾರಿ ಪ್ರಾರಂಭಿಸಲಾಗುವುದು ಇದರ ವಿಳಂಬಕ್ಕೆ ಕಾರಣಗಳೇನು? | ಕೃಷ್ಣಾ ನದಿಯಲ್ಲಿ ದಿನಾಂಕ:12/08/2019 ರಂದು ನೀರಿನ ಗರಿಷ್ಠ ಮಟ್ಟದಲ್ಲಿ ಪ್ರವಾಹ ಉಂಟಾಗಿದ್ದು, ಹಿಪ್ಪರಗಿ ಬ್ಯಾರೇಜಿನಲ್ಲಿ ದಾಖಲಾದ ಗರಿಷ್ಠ ಮಟ್ಟವು 530.15 ಮೀ. ಹಾಗೂ ನೀರಿನ ಹರಿವು 5.23 ಲಕ್ಷ ಕ್ಯೂಸೆಕ್ಸ್‌ಗಳಷ್ಟು ಆಗಿದ್ದು, ಪ್ರಸ್ತುತ ಸೇತುವೆಯ ಅನುಮೋದಿತ ವಿನ್ಯಾಸವನ್ನು ನದಿಯ ನೀರಿನ ಗರಿಷ್ಠ ಮಟ್ಟ (ಓಎಚ್.ಎಫ್.ಎಲ್) 525.50 ಮೀ. ಎಂದು ಪರಿಗಣಿಸಲಾಗಿರುತ್ತದೆ.<br><br>ಈ ಹಿನ್ನೆಲೆಯಲ್ಲಿ, ಆಗಸ್ಟ್ 2019ರಲ್ಲಿ ಕೃಷ್ಣಾ ನದಿಯಲ್ಲಿ ಬಂದಂತಹ ಗರಿಷ್ಠ ಮಟ್ಟದ ಪ್ರವಾಹವನ್ನು ಪರಿಗಣಿಸಿ, ಸೇತುವೆಯ ವೆಂಟ್‌ಗಳನ್ನು ಹೆಚ್ಚಿಸಲು ಹಾಗೂ ಸೇತುವೆಯ ತಳದ ಸ್ಲಾಬ್ ವಿನ್ಯಾಸವನ್ನು ಗರಿಷ್ಠ ಮಟ್ಟಕ್ಕೆ ಎತ್ತರಿಸುವ ಹಿನ್ನಲೆಯಲ್ಲಿ ಹಾಗೂ ಮುಂದೆ ಸೇತುವೆಗೆ ಗರಿಷ್ಠ ಪ್ರಮಾಣದ ಪ್ರವಾಹದಿಂದ ಆಗುವ ಅನಾಹುತಗಳನ್ನು ತಪ್ಪಿಸಲು, ಪರಿಷ್ಕೃತ ಗರಿಷ್ಠ ಮಟ್ಟದ ಪ್ರವಾಹಕ್ಕೆ ಅನುಸಾರವಾಗಿ ಸೇತುವೆಯ ವಿನ್ಯಾಸ ಮತ್ತು ನಕ್ಷೆಗಳನ್ವಯ ಪ್ರಸ್ತಾವನೆಯನ್ನು ತಯಾರಿಸುವ ಪ್ರಕ್ರಿಯೆಯು ನಿಗಮದ ಹಂತದಲ್ಲಿ ಪರಿಶೀಲನೆಯಲ್ಲಿದೆ. |

**ಸಂಖ್ಯೆ: ಜಸಂಇ 48 ಡಬ್ಲ್ಯೂಎಲ್ಎ 2021**

(ಸಹಿ)

(ಬಿ.ಎಸ್ ಯಡಿಯೂರಪ್ಪ)
ಮುಖ್ಯಮಂತ್ರಿ

**ಕರ್ನಾಟಕ ವಿಧಾನ ಸಭೆ**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3304 |
| ಸದಸ್ಯರ ಹೆಸರು | : | ಡಾ॥ ಅಜಯ್ ದರ್ಮ ಸಿಂಗ್ (ಜೇವರ್ಗಿ) |
| ಉತ್ತರಿಸಬೇಕಾದ ದಿನಾಂಕ | : | 23.03.2021 |
| ಉತ್ತರಿಸುವ ಸಚಿವರು | : | ಮಾನ್ಯ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರಗಿ ಜಿಲ್ಲೆಯಲ್ಲಿ ಕ್ರೀಡಾಪಟುಗಳ ಸಾಮರ್ಥ್ಯ ಹೆಚ್ಚಿಸಿ ಅವರನ್ನು ಉತ್ತೇಜಿಸಲು ಕಲ್ಯಾಣ ಕರ್ನಾಟಕ ಅಭಿವೃದ್ಧಿ ಮಂಡಳಿಯ ವತಿಯಿಂದ ಅಂತರಾಷ್ಟ್ರೀಯ ಕ್ರೀಡಾ ಸಂಕೀರ್ಣ ನಿರ್ಮಿಸಲು ಸರ್ಕಾರ ಅಲೋಚಿಸಿದೆಯೇ; | ಕಲ್ಯಾಣ ಕರ್ನಾಟಕ ಅಭಿವೃದ್ಧಿ ಮಂಡಳಿಯ ವತಿಯಿಂದ ಕಲಬುರಗಿ ಜಿಲ್ಲೆಯಲ್ಲಿ ಕ್ರೀಡಾಪಟುಗಳ ಸಾಮರ್ಥ್ಯವನ್ನು ಹೆಚ್ಚಿಸಿ ಅವರನ್ನು ಅಂತರಾಷ್ಟ್ರೀಯ ಕ್ರೀಡಾ ಸ್ಪರ್ಧೆಯಲ್ಲಿ ಭಾಗವಹಿಸಲು ಸಹಕಾರಿಯಾಗುವ ದೃಷ್ಟಿಯಿಂದ ಕ್ರೀಡಾ ಸಂಕೀರ್ಣ ನಿರ್ಮಿಸುವ ಕ್ರಮಕೈಗೊಳ್ಳಲಾಗುತ್ತಿದೆ. |
| ಆ) | ಹಾಗಿದ್ದಲ್ಲಿ, ಸದರಿ ಕ್ರೀಡಾ ಸಂಕೀರ್ಣವನ್ನು ಎಲ್ಲಿ ತೆರೆಯಲು ನಿರ್ಧರಿಸಲಾಗಿದೆ; | ಜಿಲ್ಲಾಧಿಕಾರಿ, ಕಲಬುರಗಿರವರಿಗೆ ಸೂಕ್ತ ಜಮೀನನ್ನು ಆಯ್ಕೆ ಮಾಡಲು ಪತ್ರ ವ್ಯವಹಾರ ಮಾಡಲಾಗಿದೆ. |
| ಇ) | ಈ ಸಂಬಂಧ, ಯಾವ ಪ್ರಾರಂಭಿಕ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ? (ವಿವರ ನೀಡುವುದು) | ಸೂಕ ನಿವೇಶನ ದೊರೆತ ನಂತರ ಕ್ರೀಡಾ ಸಂಕೀರ್ಣ ಪ್ರಾರಂಭಿಸುವ ಕುರಿತು ಅಗತ್ಯ ಕ್ರಮ ಕೈಗೊಳ್ಳಲಾಗುವುದು. |

**ಪಿಡಿಎಸ್ 32 ಹೆಚ್‌ಕೆಡಿ 2021**

(ಡಾ॥ ನಾರಾಯಣಗೌಡ)
ಸಚಿವರು,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

# ಕರ್ನಾಟಕ ವಿಧಾನ ಸಭೆ

1.ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3307
2. ಸದಸ್ಯರ ಹೆಸರು : ಶ್ರೀ ಮಂಜುನಾಥ ಹೆಚ್.ಪಿ (ಹುಣಸೂರು)
3. ಉತ್ತರಿಸುವ ದಿನಾಂಕ : 23-03-2021
4. ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕರ್ನಾಟಕ ಲೋಕಸೇವಾ ಆಯೋಗವು ನಡೆಸಿದ 2015ನೇ ಸಾಲಿನ ಗೆಜೆಟೆಡ್ ಪ್ರೊಬೇಷನರ್ಸ್ ಮುಖ್ಯ ಪರೀಕ್ಷೆಯ ಡಿಜಿಟಲ್ ಮೌಲ್ಯ ಮಾಪನದಲ್ಲಿ ಅಭ್ಯರ್ಥಿಗಳು ಪಡೆದುಕೊಂಡ ವಿಷಯವಾರು ಅಂಕಗಳನ್ನು url.http://WWW.kpscresults.karnataka.gov.in/gp2015ಈ ಲಿಂಕ್ (link) ನಲ್ಲಿ (front endquery based application) ನಲ್ಲಿ ಇ- ಆಡಳಿತ ಕೇಂದ್ರ (center for E- governace)ದ ಯಾವ ಸರ್ವರ್ ಮತ್ತು ಡೇಟಾಬೇಸ್‌ನನ್ನು ಬಳಸಿಕೊಂಡು ನೀಡಲಾಗಿದೆ; | ಕರ್ನಾಟಕ ಲೋಕಸೇವಾ ಆಯೋಗವು ನೀಡಿರುವ ಮಾಹಿತಿಯಂತೆ, NIC (National Informatics Centre) ವತಿಯಿಂದ ಅಪ್ಲಿಕೇಷನ್ ತಯಾರಿಸಿ ಆಯಾ ಅಭ್ಯರ್ಥಿಗಳಿಗೆ ತಮ್ಮ ವಿಷಯವಾರು ಅಂಕಗಳು ಲಭ್ಯವಾಗುವಂತೆ ಅವಕಾಶ ಕಲ್ಪಿಸಿ ರಾಜ್ಯ ದತ್ತಾಂಶ ಕೇಂದ್ರದ ಮುಖಾಂತರ ಹೋಸ್ಟ್ ಮಾಡಲಾಗಿದ್ದು ದಿ:27-02-2020ರಂದು http:/www.kpscresults.karnataka.gov.in/gp2015 ಈ ಲಿಂಕ್‌ನಲ್ಲಿ ಅಂಕಗಳನ್ನು ಡೌನ್‌ಲೋಡ್ ಮಾಡಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ. |
| ಆ | ಈ ಸರ್ವರ್ ಮತ್ತು ಡೇಟಾಬೇಸ್ ನ ಹೆಸರನ್ನು ತಿಳಿಸುವುದು? | ಯಾವುದೇ ತಂತ್ರಾಂಶವನ್ನು ಬಳಸಲು Operating System ಹಾಗೂ Database ನ ಅವಶ್ಯಕತೆ ಇರುತ್ತದೆ.<br>ಮೇಲ್ಕಂಡ ತಂತ್ರಾಂಶಕ್ಕೆ Windows Operating System ಹಾಗೂ SQL Database ಅನ್ನು ಬಳಸಲಾಗಿರುತ್ತದೆ. |

ಸಂಖ್ಯೆ: ಸಿಆಸುಇ 37 ಎಸ್‌ಎಸ್‌ಸಿ 2021

( ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3312
2) ಸದಸ್ಯರ ಹೆಸರು : ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ)
3) ಉತ್ತರಿಸುವ ದಿನಾಂಕ: : 23-03-2021
4) ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ದಿನೇ ದಿನೇ ಪೆಟ್ರೋಲ್ ಮತ್ತು ಡೀಸೆಲ್ ಬೆಲೆಗಳು ರಾಕೇಟ್ ವೇಗದಲ್ಲಿ ಏರುತ್ತಿದ್ದು, ಕೋವಿಡ್-19 ಸಂಕಷ್ಟದ ಸಮಯದಲ್ಲಿ ಜನ-ಸಾಮಾನ್ಯರ ಬದುಕಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ತೆರಿಗೆಗಳು ಮಾರಕವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯದಲ್ಲಿ ಪೆಟ್ರೋಲ್ ಮತ್ತು ಡೀಸೆಲ್ ಬೆಲೆ ಏರಿಕೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಬಂದಿದ್ದಲ್ಲಿ, ದೇಶದ ಬೇರೆ ಬೇರೆ ರಾಜ್ಯಗಳಲ್ಲಿ ತೈಲದ ಮೇಲಿನ ಅಬಕಾರಿ ಸುಂಕವನ್ನು ಕಡಿಮೆಗೊಳಿಸಿರುವುದು ನಿಜವೇ; | ದಕ್ಷಿಣದ ರಾಜ್ಯಗಳಿಗೆ ಹೋಲಿಸಿದಾಗ ಕೇರಳ ರಾಜ್ಯ ಹೊರತುಪಡಿಸಿದರೆ ಪೆಟ್ರೋಲ್ ಬೆಲೆಯು ಕರ್ನಾಟಕದಲ್ಲಿಯೇ ಕಡಿಮೆ ಇರುತ್ತದೆ. ಡೀಸೆಲ್ ಬೆಲೆಯು ದಕ್ಷಿಣದ ಇತರ ರಾಜ್ಯಗಳಿಗಿಂತ ಕರ್ನಾಟಕದಲ್ಲಿಯೇ ಅತೀ ಕಡಿಮೆ ಇರುತ್ತದೆ. |
| ಇ) | ಹಾಗಿದ್ದಲ್ಲಿ, ಅದೇರೀತಿ ನಮ್ಮ ರಾಜ್ಯ ಸರ್ಕಾರವು ಪೆಟ್ರೋಲ್ ಮತ್ತು ಡೀಸೆಲ್ ಮೇಲಿನ ತೆರಿಗೆಯನ್ನು ಕಡಿಮೆ ಮಾಡಲು ಆಸಕ್ತಿ ಹೊಂದಿದೆಯೇ; | ಪೆಟ್ರೋಲ್ ಮತ್ತು ಡೀಸೆಲ್‌ಗಳ ಬೆಲೆಯು ಮಾರುಕಟ್ಟೆ ಆಧಾರಿತವಾಗಿದ್ದು, ಅವುಗಳ ಮಾರಾಟದ ಬೆಲೆಯಲ್ಲಿ ದಿನೇದಿನೇ ಬದಲಾವಣೆಗಳಾಗುತ್ತಿದೆ. ಮೂಲ ಬೆಲೆಯಲ್ಲಿ ಹೆಚ್ಚಳವಾದಾಗ ಅವುಗಳ ಮಾರಾಟದ ತೆರಿಗೆ ಹೆಚ್ಚಳವಾಗುತ್ತದೆ. ದಕ್ಷಿಣದ ರಾಜ್ಯಗಳಿಗೆ ಹೋಲಿಸಿದಾಗ ಕೇರಳ ರಾಜ್ಯ ಹೊರತುಪಡಿಸಿದರೆ ಪೆಟ್ರೋಲ್ ಬೆಲೆಯು ಕರ್ನಾಟಕದಲ್ಲಿಯೇ ಕಡಿಮೆ ಇರುತ್ತದೆ. ಡೀಸೆಲ್ ಬೆಲೆಯು ದಕ್ಷಿಣದ ಇತರ ರಾಜ್ಯಗಳಿಗಿಂತ ಕರ್ನಾಟಕದಲ್ಲಿಯೇ ಅತೀ ಕಡಿಮೆ ಇರುತ್ತದೆ. |
| ಈ) | ಹೊಂದಿದ್ದಲ್ಲಿ, ಜನ-ಸಾಮಾನ್ಯರಿಗೆ ಪೆಟ್ರೋಲ್ ಮತ್ತು ಡೀಸೆಲ್ ಖರೀದಿಸಲು ತೊಂದರೆಯಾಗದಂತೆ ಯಾವ ರೀತಿ ಕ್ರಮಗಳನ್ನು ಕೈಗೊಳ್ಳಲಿದೆ (ವಿವರ ನೀಡುವುದು) | |

ಸಂಖ್ಯೆ: ಆಇ 44 ಸಿಎಸ್‌ಎಲ್ 2021

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ

ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3314
2. ಸದಸ್ಯರ ಹೆಸರು : ಶ್ರೀ ಲಿಂಗೇಶ್
3. ಉತ್ತರಿಸಬೇಕಾದ ದಿನಾಂಕ : 23-03-2021.
4. ಉತ್ತರಿಸುವ ಸಚಿವರು : ಸಣ್ಣ ನೀರಾವರಿ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೇಲೂರು ವಿಧಾನ ಸಭಾ ಕ್ಷೇತ್ರದ ರಾಜನಶಿರಿಯೂರು, ಹೆಬ್ಬಾಳು, ಹನಿಕೆ, ಬಂಟೇನಹಳ್ಳಿ, ಯಲಹಂಕ, ಇಬ್ಬೀಡು, ಆಂದಲೆ ಹಾಗೂ ಮತ್ತಿಕೆರೆ ಗ್ರಾಮ ಪಂಚಾಯಿತಿಗಳ ವ್ಯಾಪ್ತಿಗೆ ಬರುವ ಕೆರೆಗಳಿಗೆ ನೀರು ತುಂಬಿಸುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; | ಬೇಲೂರು ವಿಧಾನ ಸಭಾ ಕ್ಷೇತ್ರದ ರಾಜನಶಿರಿಯೂರು, ಹೆಬ್ಬಾಳು ಮತ್ತು ಇಬ್ಬೀಡು ಗ್ರಾಮ ಪಂಚಾಯಿತಿಗಳ ವ್ಯಾಪ್ತಿಗೆ ಬರುವ ಕೆರೆಗಳಿಗೆ ನೀರು ತುಂಬಿಸುವ ಕಾಮಗಾರಿಯ ರೇಖಾ ಅಂದಾಜು ಪಟ್ಟಿಯನ್ನು ರೂ.4000.00ಲಕ್ಷ ಮೊತ್ತಕ್ಕೆ ತಯಾರಿಸಿದ್ದು, ಪರಿಶೀಲನೆ ಹಂತದಲ್ಲಿದೆ.<br><br>ಕಾಮಗಾರಿಯನ್ನು ಆರ್ಥಿಕ ಲಭ್ಯತೆಯ ಅನುಸಾರ ಕೈಗೊಳ್ಳಲು ಪರಿಶೀಲಿಸಲಾಗುವುದು. |
| ಆ | ಹಾಗಿದ್ದಲ್ಲಿ, ಸದರಿ ಪ್ರಸ್ತಾವನೆಯು ಯಾವ ಹಂತದಲ್ಲಿದೆ; ಯಾವಾಗ ಅನುದಾನ ಮಂಜೂರು ಮಾಡಲಾಗುವುದು? (ಸಂಪೂರ್ಣ ವಿವರ ನೀಡುವುದು) | |

ಸಂಖ್ಯೆ: ಸನೀಇ 186 ವಿಸವಿ 2021.

(ಜೆ.ಸಿ.ಮಾಧುಸ್ವಾಮಿ,)
ಸಣ್ಣ ನೀರಾವರಿ ಸಚಿವರು.

# ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3315 |
| 2 | ವಿಧಾನ ಸಭಾ ಸದಸ್ಯರ ಹೆಸರು | : | ಶ್ರೀ ಲಿಂಗೇಶ ಕೆ.ಎಸ್. (ಬೇಲೂರು) |
| 3 | ಉತ್ತರಿಸುವ ದಿನಾಂಕ | : | 23-03-2021 |
| 4 | ಉತ್ತರಿಸುವ ಸಚಿವರು | : | ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೇಲೂರು ವಿಧಾನಸಭಾ ಕ್ಷೇತ್ರಕ್ಕೆ ಅಗ್ನಿಶಾಮಕ ಠಾಣೆಯ ಅತ್ಯವಶ್ಯಕವಿದ್ದು, ಅಗ್ನಿಶಾಮಕ ಠಾಣೆಯನ್ನು ಮಂಜೂರು ಮಾಡುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ ; | ಈಗಾಗಲೇ ಹಾಸನ ಜಿಲ್ಲೆಯ ಬೇಲೂರು ಅಗ್ನಿಶಾಮಕ ಠಾಣೆ ಸ್ಥಾಪನೆಗೆ ಮಂಜೂರಾತಿ ನೀಡಿದ್ದು, ಸದರಿ ಅಗ್ನಿಶಾಮಕ ಠಾಣೆಯು ದಿನಾಂಕ:05-05-2009 ರಿಂದ ಖಾಯಂ ಅಗ್ನಿಶಾಮಕ ಠಾಣಾ ಕಟ್ಟಡದಲ್ಲಿ ಕಾರ್ಯ ನಿರ್ವಹಿಸುತ್ತಿದೆ. ಮತ್ತೊಂದು ಹೊಸ ಅಗ್ನಿಶಾಮಕ ಠಾಣೆ ಸ್ಥಾಪಿಸುವ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |
| ಆ) | ಹಾಗಿದ್ದಲ್ಲಿ, ಸದರಿ ಪ್ರಸ್ತಾವನೆಯು ಯಾವ ಹಂತದಲ್ಲಿದೆ; ಬೇಲೂರು ಕ್ಷೇತ್ರಕ್ಕೆ ಯಾವಾಗ ಅಗ್ನಿಶಾಮಕ ಠಾಣೆಯನ್ನು ಮಂಜೂರು ಮಾಡಲಾಗುವುದು (ಸಂಪೂರ್ಣ ವಿವರ ನೀಡುವುದು)? | ಉದ್ಭವಿಸುವುದಿಲ್ಲ |

**ಸಂಖ್ಯೆ: ಒಇ 46 ಎಸ್‌ಎಫ್‌ಬಿ 2021**

(ಬಸವರಾಜ ಬೊಮ್ಮಾಯಿ)
ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು
ಹಾಗೂ ಶಾಸನ ರಚನೆ ಸಚಿವರು

ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3316
2. ಸದಸ್ಯರ ಹೆಸರು : ಶ್ರೀ ಕೆ.ಎಸ್.ಲಿಂಗೇಶ
3. ಉತ್ತರಿಸಬೇಕಾದ ದಿನಾಂಕ : 23-03-2021

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | 2018-19ನೇ ಸಾಲಿನಲ್ಲಿ ಕಾವೇರಿ ನೀರಾವರಿ ನಿಗಮದ ಯಗಚಿ ಯೋಜನಾ ವಿಭಾಗದಿಂದ ಬೇಲೂರು ವಿಧಾನಸಭಾ ಕ್ಷೇತ್ರಕ್ಕೆ ಮಂಜೂರಾಗಿರುವ ಹೆಚ್ಚುವರಿ ಕಾಮಗಾರಿಗಳ ಅನುದಾನ/ಟೆಂಡರ್ ಪ್ರಕ್ರಿಯೆಯನ್ನು ತಡೆಹಿಡಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | 2018-19ನೇ ಸಾಲಿನಲ್ಲಿ ಕಾವೇರಿ ನೀರಾವರಿ ನಿಗಮದ ವ್ಯಾಪ್ತಿಯಲ್ಲಿನ ಗೊರೂರು ವಲಯದಲ್ಲಿ ಬರುವ ಯಗಚಿ ಯೋಜನಾ ವಿಭಾಗ, ಬೇಲೂರು ರಡಿಯಲ್ಲಿನ ಬೇಲೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಮೂಲಭೂತ ಸೌಕರ್ಯ ಕಲ್ಪಿಸುವ ರೂ.46.10 ಕೋಟಿ ಮೊತ್ತದ ಒಟ್ಟು 85 ಸಂಖ್ಯೆ ಕಾಮಗಾರಿಗಳ ಹೆಚ್ಚುವರಿ ಕಾರ್ಯಕ್ರಮ ಪಟ್ಟಿಗೆ ಕಾವೇರಿ ನೀರಾವರಿ ನಿಗಮದಿಂದ ಅನುಮೋದನೆ ನೀಡಲಾಗಿರುತ್ತದೆ.<br><br>ಸದರಿ ಹೆಚ್ಚುವರಿ ಕಾಮಗಾರಿಗಳು 2019-20ನೇ ಸಾಲಿನ ಮುಂದುವರೆದ ಕಾಮಗಾರಿಗಳ ಪಟ್ಟಿಯಲ್ಲಿ ಸೇರ್ಪಡೆಗೊಂಡಿದ್ದು, ದಿನಾಂಕ:20-09-2019 ರಂದು ನಡೆದ ಕಾವೇರಿ ನೀರಾವರಿ ನಿಗಮದ ಮಂಡಳಿಯ 70ನೇ ಸಭೆಯ ನಿರ್ಣಯದಂತೆ ಇನ್ನೂ ಅನುಷ್ಠಾನಗೊಳ್ಳದ ವಿವಿಧ ಪ್ರಕ್ರಿಯೆಯಲ್ಲಿರುವ ಹೊಸ ಕಾಮಗಾರಿಗಳನ್ನು ಆಡಳಿತಾತ್ಮಕ ಹಾಗೂ ಆರ್ಥಿಕ ಶಿಸ್ತನ್ನು ಕಾಯ್ದುಕೊಳ್ಳುವ ಹಿತದೃಷ್ಟಿಯಿಂದ ಕೈಬಿಡಲಾಗಿದೆ. |
| ಆ. | ಬಂದಿದ್ದಲ್ಲಿ, ಅನುಷ್ಠಾನ ಪ್ರಕ್ರಿಯೆಗಳು ವಿವಿಧ ಹಂತದಲ್ಲಿರುವ ಕಾಮಗಾರಿಗಳಿಗೆ ನೀಡಿರುವ ತಡೆ ಆದೇಶವನ್ನು ಯಾವಾಗ ಹಿಂಪಡೆಯಲಾಗುವುದು; ಯಾವಾಗ ಅನುದಾನ ಬಿಡುಗಡೆಗೊಳಿಸಲಾಗುವುದು? (ಸಂಪೂರ್ಣ ವಿವರ ನೀಡುವುದು) | 70 ನೇ ಮಂಡಳಿ ಸಭೆಯ ನಿರ್ಣಯದಂತೆ ತಡೆಹಿಡಿಯಲಾಗಿರುವ ಬೇಲೂರು ವಿಧಾನಸಭಾ ಕ್ಷೇತ್ರದ ಮೂಲಭೂತ ಸೌಕರ್ಯ ಕಲ್ಪಿಸುವ 85 ಸಂಖ್ಯೆಯ ರೂ.46.10 ಕೋಟಿ ಮೊತ್ತದ ಕಾಮಗಾರಿಗಳ ಪೈಕಿ ರೂ.13.73 ಕೋಟಿ ಮೊತ್ತದ 17 ಸಂಖ್ಯೆಯ ದೇವಸ್ಥಾನಗಳನ್ನು ಹೊರತುಪಡಿಸಿ ಒಟ್ಟಾರೆ, ರೂ.32.37 ಕೋಟಿ ಮೊತ್ತದ 68 ಸಂಖ್ಯೆಯ Non Grounded (Under Tender Process) ಕಾಮಗಾರಿಗಳಿಗೆ ಹೆಚ್ಚುವರಿ ಅನುದಾನ ಮಂಜೂರು ಮಾಡುವಂತೆ ಮತ್ತು ಟೆಂಡರ್ ಪ್ರಕ್ರಿಯೆಯನ್ನು ಇತ್ಯರ್ಥಗೊಳಿಸಿ, ಕಾರ್ಯಾದೇಶ ನೀಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸುವ ಬಗ್ಗೆ ಅನುಮೋದನೆ ಕೋರಿ ನಿಗಮದಿಂದ ಪ್ರಸ್ತಾವನೆ ಸ್ವೀಕೃತವಾಗಿದ್ದು, ಪರಿಶೀಲನೆಯಲ್ಲಿದೆ. |

***ಸಂಖ್ಯೆ:ಜಸಂಇ 86 ಎಸ್ಎಲ್ಎ 2021***

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3321
ಸದಸ್ಯರ ಹೆಸರು : ಶ್ರೀ.ಈಶ್ವರ್ ಖಂಡ್ರೆ (ಭಾಲ್ಕಿ)
ಉತ್ತರಿಸುವ ದಿನಾಂಕ : 23-03-2021

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | 2019-20 ನೇ ಸಾಲಿನ ಆಯವ್ಯಯದಲ್ಲಿ ಬೀದರ್ ಜಿಲ್ಲೆಯಲ್ಲಿ ಯಾವ ಯಾವ ನೀರಾವರಿ ಯೋಜನೆಗಳನ್ನು ಕೈಗೆತ್ತಿಕೊಳ್ಳಲಾಗಿದೆ: ಇದಕ್ಕೆ ಎಷ್ಟು ಅನುದಾನ ಮೀಸಲಿಡಲಾಗಿದೆ: ಇಲ್ಲಿಯವರೆಗೆ ಸದರಿ ಯೋಜನೆಗಳ ವಾಸ್ತವಿಕ ಸ್ಥಿತಿಗಳೇನು: (ಸಂಪೂರ್ಣ ವಿವರ ನೀಡುವದು) | ಬೀದರ್ ಜಿಲ್ಲೆಯಲ್ಲಿ 2019-20ನೇ ಸಾಲಿನ ಆಯವ್ಯಯದಲ್ಲಿ ಘೋಷಣೆಯಾದ ಯೋಜನೆಗಳ ವಿವರಗಳು ಕೆಳಗಿನಂತಿವೆ: |
| ಆ | 2019-20 ನೇ ಸಾಲಿನ ಆಯವ್ಯಯದಲ್ಲಿ ಘೋಷಣೆಯಾದಂತಹ ಕಾಮಗಾರಿಗಳಲ್ಲಿ ಇನ್ನೂ ಅನೇಕ ಕಾಮಗಾರಿಗಳು ಇದೂವರೆಗೂ ಪ್ರಾರಂಭವಾಗದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | (see table below) |
| ಇ | ಈ ಬಗ್ಗೆ ಈಗಲಾದರೂ ಸರ್ಕಾರ ಆಯವ್ಯಯದಲ್ಲಿ ಘೋಷಿಸಲಾದಂತಹ ವಿವಿಧ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಕ್ರಮವಹಿಸುವುದೇ? | ಸದರಿ ಯೋಜನೆಗಳಿಗೆ ಅನುದಾನದ ಲಭ್ಯತೆ ಮೇರೆಗೆ ಆರ್ಥಿಕ ಇಲಾಖೆಯ ಸಹಮತಿ ಪಡೆದು. ಅಗತ್ಯ ಕ್ರಮ ವಹಿಸಲು ಯೋಜಿಸಿದೆ. |

| ಕ್ರ. ಸಂ. | 2019-20ನೇ ಸಾಲಿನ ಆಯವ್ಯಯದಲ್ಲಿ ಘೋಷಣೆಯಾದ ಯೋಜನೆಗಳ ವಿವರಗಳು | ಆಯ್ಯವ್ಯಯದಲ್ಲಿ ಘೋಷಣೆಯಾದ ಮೊತ್ತ ರೂ. ಕೋಟಿಗಳಲ್ಲಿ | ಪ್ರಸ್ತುತ ಹಂತ |
|---|---|---|---|
| 1 | ಬಸವಕಲ್ಯಾಣ ಮತ್ತು ಭಾಲ್ಕಿ ತಾಲೂಕುಗಳ ಜಮೀನುಗಳಿಗೆ ನೀರಾವರಿ ಒದಗಿಸುವ ಹಾಗೂ ಕೆರೆಗಳನ್ನು ತುಂಬಿಸುವ ಯೋಜನೆ. | 75.00 | ಸದರಿ ಯೋಜನೆಗೆ ಮೊದಲನೇ ಹಂತದ ಕಾಮಗಾರಿಗಳನ್ನು ಕೈಗೊಳ್ಳಲು ರೂ.647.94 ಕೋಟಿಗಳ ಮೊತ್ತದ ಯೋಜನಾ ವರದಿಯನ್ನು ಆರ್ಥಿಕ ಇಲಾಖೆಯ ಸಹಮತಿಗಾಗಿ ಕಳುಹಿಸಲಾಗಿ, ಆರ್ಥಿಕ ಇಲಾಖೆಯು ಸದರಿ ಪ್ರಸ್ತಾವನೆಯನ್ನು ಪ್ರಸ್ತುತ ಮುಂದೂಡುವಂತೆ ನಿರ್ದೇಶಿಸಿರುತ್ತದೆ. |
| 2) | ಬೀದರ ನಗರ ವ್ಯಾಪ್ತಿಯಲ್ಲಿ ಬರುವ ಕೆರೆಗಳನ್ನು ಮಾಂಜ್ರಾ ನದಿಯಿಂದ ನೀರನ್ನು ತುಂಬಿಸುವ ಯೋಜನೆ. | 75.00 | ಸದರಿ ಪ್ರಸ್ತಾವನೆಗೆ ವಿಸ್ತೃತ ಯೋಜನಾ ವರಿದಿಯನ್ನು ಕರ್ನಾಟಕ ನೀರಾವರಿ ನಿಗಮದ ತಯಾರಿಕಾ ಹಂತದಲ್ಲಿರುತ್ತದೆ. |
| 3) | ಕಾರಂಜಾ ಯೋಜನೆಯ ಎಡದಂಡೆ ಮತ್ತು ಬಲದಂಡೆ ಕಾಲುವೆಗಳ ಅಚ್ಚುಕಟ್ಟು ಪ್ರದೇಶಕ್ಕೆ ನೀರಾವರಿ ಯೋಜನೆ | 80.00 | |

ಸಂಖ್ಯೆ:ಜಸಂಇ 81 ಎಂಎಲ್ಎ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ.

## ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3323 |
| ಸದಸ್ಯರ ಹೆಸರು | : | ಶ್ರೀ ಅವಿನಾಶ್ ಉಮೇಶ್ ಜಾಧವ್ ಡಾ॥ (ಚಿಂಚೋಳಿ) |
| ಉತ್ತರಿಸಬೇಕಾದ ದಿನಾಂಕ | : | 23.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ರೈತರಿಗೆ ಕೃಷಿ ಮಾಡಲು ಅನುಕೂಲವಾಗುವಂತೆ ಯಾವ ಯಾವ ಜಿಲ್ಲೆಗಳಲ್ಲಿ ದಿನದ ಎಷ್ಟು ಗಂಟೆ 3 ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ; | ರಾಜ್ಯದ ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯ ಎಲ್ಲಾ ಜಿಲ್ಲೆಗಳಲ್ಲಿ ಪ್ರಸ್ತುತ ಸರ್ಕಾರದ ಆದೇಶದನ್ವಯ ರೈತರ ನೀರಾವರಿ ಪಂಪ್‌ಸೆಟ್‌ಗಳಿಗೆ ದಿನವಹಿ ಕನಿಷ್ಠ 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್‌ನ್ನು ಸರಬರಾಜು ಮಾಡಲಾಗುತ್ತಿದೆ.<br><br>ತಾಂತ್ರಿಕ ಸಾಧ್ಯತೆ ಇರುವ ಪ್ರದೇಶಗಳಲ್ಲಿ ರೈತರ ನೀರಾವರಿ ಪಂಪ್‌ಸೆಟ್‌ಗಳಿಗೆ ಹಗಲಿನ ವೇಳೆಯಲ್ಲಿ ನಿರಂತರ 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ.<br><br>ತಾಂತ್ರಿಕ ಸಾಧ್ಯತೆ ಇಲ್ಲದಿರುವ ಪ್ರದೇಶಗಳಲ್ಲಿ ರೈತರ ನೀರಾವರಿ ಪಂಪ್‌ಸೆಟ್‌ಗಳಿಗೆ ಹಗಲಿನ ವೇಳೆ 4 ಗಂಟೆಗಳ ಕಾಲ ಹಾಗೂ ರಾತ್ರಿ ವೇಳೆ 3 ಗಂಟೆಗಳ ಕಾಲ ಒಟ್ಟು 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. |
| ಆ) | ಕಲಬುರಗಿ ಜಿಲ್ಲೆಯು ಅತೀ ಹಿಂದುಳಿದ ಪ್ರದೇಶವಾಗಿರುವುದರಿಂದ ಕೃಷಿ ಅಭಿವೃದ್ಧಿಗೆ 24 ಗಂಟೆಗಳ ಕಾಲ 3 ಫೇಸ್ ವಿದ್ಯುತ್ ಸರಬರಾಜು ಮಾಡಲು ಸರ್ಕಾರ ಕ್ರಮಗಳೇನಾದರೂ ಕೈಗೊಂಡಿದೆಯೇ? | ಕೃಷಿ ಪಂಪಸೆಟ್‌ಗಳಿಗೆ 7 ಗಂಟೆಗಳ ಕಾಲ 3 ಫೇಸ್ ಉಚಿತ ವಿದ್ಯುತ್ ಪೂರೈಸಲು ಸರ್ಕಾರದಿಂದ ಸಹಾಯಧನ ಬಿಡುಗಡೆಯಾಗುತ್ತಿದ್ದು, ಅವಧಿ ಹೆಚ್ಚಿಸುವ ಪ್ರಸ್ತಾವನೆ ಸಧ್ಯಕ್ಕೆ ಸರ್ಕಾರದ ಮುಂದಿರುವುದಿಲ್ಲ. |

ಸಂಖ್ಯೆ: ಎನರ್ಜಿ 114 ಪಿಪಿಎಂ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3324
ಸದಸ್ಯರ ಹೆಸರು : ಶ್ರೀ ಅವಿನಾಶ್ ಉಮೇಶ ಜಾಧವ್ ಡಾ. (ಚಿಂಚೋಳಿ)
ಉತ್ತರಿಸುವ ದಿನಾಂಕ : 23.03.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಿಂದ ಜನವರಿ 2021 ಅಂತ್ಯದವರೆಗೆ ಕಲಬುರಗಿ ಜಿಲ್ಲೆಯ ಚಿಂಚೋಳಿ ವಿಧಾನಸಭಾ ಮತಕ್ಷೇತ್ರ ವ್ಯಾಪ್ತಿಯಲ್ಲಿ ಬೃಹತ್ ನೀರಾವರಿ ಇಲಾಖಾ ವತಿಯಿಂದ ಯಾವ ಯಾವ ಅಭಿವೃದ್ಧಿ ಕಾಮಗಾರಿಗಳಿಗೆ ಪ್ರಸ್ತಾವನೆ ಸಲ್ಲಿಸಲಾಗಿದೆ | ಕಲಬುರಗಿ ಜಿಲ್ಲೆಯ ಚಿಂಚೋಳಿ ವಿಧಾನಸಭಾ ಮತಕ್ಷೇತ್ರ ವ್ಯಾಪ್ತಿಯಲ್ಲಿ ಕೆಳದಂಡೆ ಮುಲ್ಲಾಮಾರಿ ಹಾಗೂ ಬೆಣ್ಣೆತೋರಾ ಯೋಜನೆಯ ಆಧುನೀಕರಣ ಕಾಮಗಾರಿಗಳು ಪ್ರಸ್ತುತ ಪ್ರಗತಿಯಲ್ಲಿದ್ದು, ಸರ್ಕಾರದ ಮಟ್ಟದಲ್ಲಿ ಇತರೆ ಯಾವುದೇ ಕಾಮಗಾರಿ ಪ್ರಸ್ತಾವನೆಯು ಇರುವುದಿಲ್ಲ. |
| ಆ) | ಹಾಗಿದ್ದಲ್ಲಿ, ಮುಲ್ಲಾಮಾರಿ ಯೋಜನೆಗೆ ಪ್ರಸ್ತಾವನೆಯನ್ನು ಯಾವಾಗ ಸಲ್ಲಿಸಲಾಗಿದೆ; ಸದರಿ ಯೋಜನೆಯ ಮಂಜೂರಾತಿಗೆ ವಿಳಂಬವಾಗಲು ಕಾರಣಗಳೇನು; | |
| ಇ) | ಈ ಯೋಜನೆಗೆ ಯಾವಾಗ ಮಂಜೂರಾತಿ ನೀಡಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗುವುದು; ಕಾಲಮಿತಿ ಎಷ್ಟು (ಸಂಪೂರ್ಣ ಮಾಹಿತಿ ಒದಗಿಸುವುದು)? | |

ಸಂಖ್ಯೆ:ಜಸಂಇ 82 ಎಂಎಲ್ಎ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3325 |
| ಮಾನ್ಯ ಸದಸ್ಯರ ಹೆಸರು | ಶ್ರೀ ಶಿವಾನಂದ ಎಸ್. ಪಾಟೀಲ್ (ಬಸವನಬಾಗೇವಾಡಿ) |
| ಉತ್ತರಿಸಬೇಕಾದ ದಿನಾಂಕ | 23–03–2021 |
| ಉತ್ತರಿಸಬೇಕಾದವರು | ಅಬಕಾರಿ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಎಂ.ಎಸ್.ಐ.ಎಲ್ (MSIL) ವತಿಯಿಂದ ಎಷ್ಟು ಮದ್ಯ ಮಾರಾಟ ಮಳಿಗೆಗಳನ್ನು ತೆರೆಯಲಾಗಿರುತ್ತದೆ; | ರಾಜ್ಯದಲ್ಲಿ ಎಂ.ಎಸ್.ಐ.ಎಲ್ (MSIL) ವತಿಯಿಂದ ಒಟ್ಟು 921 ಮದ್ಯ ಮಾರಾಟ ಮಳಿಗೆಗಳನ್ನು ತೆರೆಯಲಾಗಿರುತ್ತದೆ. |
| ಆ) | ರಾಜ್ಯದಲ್ಲಿ ಎಂ.ಎಸ್.ಐ.ಎಲ್ ವತಿಯಿಂದ ಹೊಸದಾಗಿ ಮದ್ಯ ಮಾರಾಟ ಮಳಿಗೆಗಳನ್ನು ತೆರೆಯಲು ಉದ್ದೇಶಿಸಲಾಗಿದೆಯೇ; | ರಾಜ್ಯದಲ್ಲಿ 2009ರಲ್ಲಿ ಮಂಜೂರು ಮಾಡಲಾದ 463 ಸಿಎಲ್–11ಸಿ ಸನ್ನದುಗಳು ಹಾಗೂ 2016ರಲ್ಲಿ ಮಂಜೂರು ಮಾಡಲಾದ 900 ಸಿಎಲ್–11ಸಿ ಸನ್ನದುಗಳು ಅಂದರೆ ಒಟ್ಟಾರೆ 1363 ಸಿಎಲ್ 11–ಸಿ ಸನ್ನದುಗಳ ಪೈಕಿ ಒಟ್ಟಾರೆ 921 ಮಳಿಗೆಗಳನ್ನು ತೆರೆಯಲಾಗಿದ್ದು, ಇನ್ನೂ 442 ಮಳಿಗೆಗಳನ್ನು ತೆರೆಯಲು ಕೋಟಾ ಬಾಕಿ ಇರುತ್ತದೆ. |
| ಇ) | ಹಾಗಿದ್ದಲ್ಲಿ, ರಾಜ್ಯದಲ್ಲಿ ಎಂ.ಎಸ್.ಐ.ಎಲ್ ವತಿಯಿಂದ ಎಷ್ಟು ಹೊಸ ಮದ್ಯ ಮಾರಾಟ ಮಳಿಗೆಗಳನ್ನು ತೆರೆಯಲಾಗುವುದು? | ಉದ್ಭವಿಸುವುದಿಲ್ಲ. |

ಆಇ 46 ಇಎಲ್‌ಕ್ಯೂ 2021

(ಕೆ. ಗೋಪಾಲಯ್ಯ)
ಅಬಕಾರಿ ಸಚಿವರು

ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3326 |
| 2 | ಸದಸ್ಯರ ಹೆಸರು | : | ಶ್ರೀ ಶಿವಾನಂದ ಎಸ್.ಪಾಟೀಲ್ |
| 3 | ಉತ್ತರಿಸಬೇಕಾದ ದಿನಾಂಕ | : | 23.03.2021. |
| 4 | ಉತ್ತರಿಸುವವರು | : | ಸಣ್ಣ ನೀರಾವರಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೇನಾಳ ಆರ್.ಎಸ್. ಮತ್ತು ಅಬ್ಬಿಹಾಳ ಮನರ್ ವಸತಿ ಕೇಂದ್ರದ ಮಧ್ಯದಲ್ಲಿ ಬ್ರಿಡ್ಜ್-ಕಂ-ಬಾಂದಾರ ನಿರ್ಮಿಸುವಂತೆ ಕೋರಿ ಸರ್ಕಾರದ ಮುಂದೆ ಪ್ರಸ್ತಾವನೆ ಇದೆಯೇ; | ಪ್ರಸ್ತಾವನೆ ಇರುತ್ತದೆ |
| ಆ | ಹಾಗಿದ್ದಲ್ಲಿ, ಸದರಿ ಬ್ರಿಡ್ಜ್-ಕಂ-ಬಾಂದಾರ ನಿರ್ಮಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಸದರಿ ಪ್ರಸ್ತಾವನೆಯ ತಾಂತ್ರಿಕ ಶಕ್ಯತೆಯನ್ನು ಕುರಿತು ಪರಿಶೀಲಿಸಿ ಇಲಾಖೆಗೆ ಒದಗಿಸಲಾಗುವ ಅನುದಾನವನ್ನು ಆಧರಿಸಿ ಆದ್ಯತೆ ಮೇರೆಗೆ ಕಾಮಗಾರಿಯನ್ನು ಕೈಗೊಳ್ಳಲು ಪರಿಶೀಲಿಸಲಾಗುವುದು. |
| ಇ | ಇದಕ್ಕಾಗಿ ತಗಲುವ ವೆಚ್ಚ ಎಷ್ಟು; | ಸದರಿ ಕಾಮಗಾರಿಗೆ ಪ್ರಸಕ್ತ ಸಾಲಿನ ದರ ಪಟ್ಟಿಯಂತೆ ರೂ.130.00 ಲಕ್ಷಗಳಾಗಬಹುದೆಂದು ಅಂದಾಜಿಸಲಾಗಿದೆ. |
| ಈ | ಈ ಕಾಮಗಾರಿಯನ್ನು ಮಂಜೂರು ಮಾಡಲಾಗಿದೆಯೇ; | ಪ್ರಸ್ತುತ ಸದರಿ ಕಾಮಗಾರಿ ಮಂಜೂರಾಗಿರುವುದಿಲ್ಲ. |
| ಉ | ಹಾಗಿದ್ದಲ್ಲಿ ಕಾಮಗಾರಿ ನಿರ್ಮಾಣದಲ್ಲಿ ಆಗುತ್ತಿರುವ ವಿಳಂಬಕ್ಕೆ ಕಾರಣಗಳೇನು? | ಅನ್ವಯಿಸುವುದಿಲ್ಲ. |

ಕಡತ ಸಂಖ್ಯೆ: MID 204 LAQ 2021

(ಜೆ.ಸಿ.ಮಾಧುಸ್ವಾಮಿ)
ಸಣ್ಣ ನೀರಾವರಿ ಸಚಿವರು

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3332
2. ಸದಸ್ಯರ ಹೆಸರು : ಡಾ॥ ಯತೀಂದ್ರ ಸಿದ್ದರಾಮಯ್ಯ
3. ಉತ್ತರಿಸಬೇಕಾದ ದಿನಾಂಕ : 23-03-2021

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ವರುಣಾ ವಿಧಾನಸಭಾ ಕ್ಷೇತ್ರದ ನಂಜನಗೂಡು ತಾಲ್ಲೂಕು ದೊಡ್ಡಕೌಲಂದೆ ಭಾಗದಲ್ಲಿ ನೀರಿಗೆ ತೊಂದರೆಯಿದ್ದು, ನೀರಿನ ಕೊರತೆ ನೀಗಿಸಲು ಹೊಸದಾಗಿ ಕೆರೆಗೆ ನೀರು ತುಂಬಿಸುವ ಯೋಜನೆಯನ್ನು ಕೈಗೊಳ್ಳಲಾಗಿದೆಯೇ; ಇಲ್ಲದಿದ್ದಲ್ಲಿ, ಯಾವಾಗ ಕೈಗೊಳ್ಳಲಾಗುವುದು; ಯಾವಾಗ ಮಂಜೂರಾತಿ ಮಾಡಲಾಗುವುದು; (ವಿವರ ನೀಡುವುದು) | ವರುಣಾ ವಿಧಾನಸಭಾ ಕ್ಷೇತ್ರದ ನಂಜನಗೂಡು ತಾಲ್ಲೂಕು ದೊಡ್ಡಕೌಲಂದೆ ಭಾಗದಲ್ಲಿ ಬರುವ ಹಳೆಪುರ ಕೆರೆ, ಕೊಣನೂರು ಕೆರೆಗಳಿಗೆ ಆಲಂಬೂರು ಏತ ಯೋಜನೆಯ ಮೊದಲನೇ ಹಂತದಡಿ ನೀರು ತುಂಬಿಸಲಾಗುತ್ತಿದೆ. ಸದರಿ ಯೋಜನೆಯನ್ನು 2014-15 ರಲ್ಲಿ ಚಾಲನೆಗೊಳಿಸಲಾಗಿದ್ದು, ಆ ಸಾಲಿನಿಂದ ಪ್ರಸ್ತುತ ಸಾಲಿನವರೆಗೂ ನೀರನ್ನು ಹರಿಸಲಾಗುತ್ತಿದೆ. ಆಲಂಬೂರು ಮೊದಲನೇ ಹಂತದಡಿ ಹೆಚ್ಚುವರಿಯಾಗಿ ಚುಂಚನಹಳ್ಳಿ ಕೆರೆಗೆ ನೀರು ತುಂಬಿಸಲಾಗುತ್ತಿದೆ.<br><br>ಈ ಭಾಗದಲ್ಲಿ ಬರುವ ಕೆರೆಗಳಿಗೆ ನೀರು ತುಂಬಿಸುವ ಯಾವುದೇ ಹೊಸ ಪ್ರಸ್ತಾಪವಿರುವುದಿಲ್ಲ. |
| ಆ | ಈ ಕ್ಷೇತ್ರದಲ್ಲಿ ಹಾರೋಹಳ್ಳಿ ಲೋ-ಲೆವೆಲ್ ನಾಲಾ ಕಾಮಗಾರಿಯನ್ನು ಕೈಗೊಳ್ಳಲು ಕಳೆದ ಎರಡು ವರ್ಷಗಳಿಂದ ಅನುಮೋದನೆಗೆ ಬಾಕಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವಾಗ ಮಂಜೂರಾತಿ ನೀಡಲಾಗುವುದು; (ವಿವರ ನೀಡುವುದು) | ವರುಣಾ ವಿಧಾನಸಭಾ ಕ್ಷೇತ್ರದ ಟಿ.ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆಯ ಹಾರೋಹಳ್ಳಿ ಲೋ-ಲೆವೆಲ್ ನಾಲಾ ಆಧುನೀಕರಣ ಕಾಮಗಾರಿಯ ರೂ.21.80 ಕೋಟಿ ಮೊತ್ತದ ಅಂದಾಜು ಪ್ರಸ್ತಾವನೆ ಕುರಿತು ಆರ್ಥಿಕ ಇಲಾಖೆಯು ಜಲ ಸಂಪನ್ಮೂಲ ಇಲಾಖೆಯಡಿ ಈಗಾಗಲೇ ಅನುಮೋದಿತ ಕಾಮಗಾರಿಗಳ ಕಾರ್ಯಭಾರ ಅಧಿಕವಾಗಿರುವುದರಿಂದ, ಪ್ರಸ್ತಾಪಿತ ಕಾಮಗಾರಿಯನ್ನು ಕೈಗೆತ್ತಿಕೊಳ್ಳುವುದನ್ನು ಕೈಬಿಡುವಂತೆ ಸೂಚಿಸಿರುತ್ತದೆ.<br><br>ಸದರಿ ಕಾಮಗಾರಿಯನ್ನು ಮುಂಬರುವ ಆರ್ಥಿಕ ವರ್ಷಗಳಲ್ಲಿ ಅನುದಾನದ ಲಭ್ಯತೆಗನುಸಾರವಾಗಿ ಕೈಗೊಳ್ಳುವ ಕುರಿತು ಪರಿಶೀಲಿಸಲಾಗುವುದು. |

*ಸಂಖ್ಯೆ:ಜಸಂಇ 81 ಎನ್‌ಎಲ್‌ಎ 2021*

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

1.ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3333
2. ಸದಸ್ಯರ ಹೆಸರು : ಶ್ರೀ ಯತೀಂದ್ರ ಸಿದ್ಧರಾಮಯ್ಯ ಡಾ|| (ವರುಣ)
3. ಉತ್ತರಿಸುವ ದಿನಾಂಕ : 23-03-2021
4. ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕರ್ನಾಟಕ ಲೋಕಸೇವಾ ಆಯೋಗವು ನಡೆಸಿದ 2015ನೇ ಸಾಲಿನ ಗೆಜೆಟೆಡ್ ಪ್ರೊಬೆಷನರ್ಸ್ ಮುಖ್ಯ ಪರೀಕ್ಷೆಯ ಡಿಜಿಟಲ್ ಮೌಲ್ಯಮಾಪನದಲ್ಲಿ ಅಭ್ಯರ್ಥಿಗಳು ಪಡೆದುಕೊಂಡ ವಿಷಯವಾರು ಅಂಕಗಳನ್ನು url:http;//www.kpscresults.karnataka.gov.in/gp2015 ಈ ಲಿಂಕ್ (link) ನಲ್ಲಿ (front end query based application) ನಲ್ಲಿ ಇ-ಆಡಳಿತ ಕೇಂದ್ರ (centre for E-governance) ದ ಯಾವ ಸರ್ವರ್ ಮತ್ತು ಡೇಟಾಬೇಸ್ ನ್ನು ಬಳಸಿಕೊಂಡು ನೀಡಲಾಗಿದೆ; | ಕರ್ನಾಟಕ ಲೋಕಸೇವಾ ಆಯೋಗವು ನೀಡಿರುವ ಮಾಹಿತಿಯಂತೆ, NIC (National Informatics Centre) ವತಿಯಿಂದ ಅಪ್ಲಿಕೇಷನ್ ತಯಾರಿಸಿ ಆಯಾ ಅಭ್ಯರ್ಥಿಗಳಿಗೆ ತಮ್ಮ ವಿಷಯವಾರು ಅಂಕಗಳು ಲಭ್ಯವಾಗುವಂತೆ ಅವಕಾಶ ಕಲ್ಪಿಸಿ ರಾಜ್ಯ ದತ್ತಾಂಶ ಕೇಂದ್ರುದ ಮುಖಾಂತರ ಹೋಸ್ಟ್ ಮಾಡಲಾಗಿದ್ದು ದಿ:27-02-2020ರಂದು http:/www.kpscresults.karnataka.gov.in/gp2015 ಈ ಲಿಂಕ್‌ನಲ್ಲಿ ಅಂಕಗಳನ್ನು ಡೌನ್ ಲೋಡ್ ಮಾಡಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ. |
| ಆ | ಈ ಸರ್ವರ್ ಮತ್ತು ಡೇಟಾಬೇಸ್‌ನ ಹೆಸರನ್ನು ತಿಳಿಸುವುದು? | ಯಾವುದೇ ತಂತ್ರಾಂಶವನ್ನು ಬಳಸಲು Operating System ಹಾಗೂ Database ನ ಅವಶ್ಯಕತೆ ಇರುತ್ತದೆ.<br>ಮೇಲ್ಕಂಡ ತಂತ್ರಾಂಶಕ್ಕೆ Windows Operating System ಹಾಗೂ SQL Database ಅನ್ನು ಬಳಸಲಾಗಿರುತ್ತದೆ. |

ಸಂಖ್ಯೆ: ಸಿಆಸುಇ 36 ಎಸ್‌ಎಸ್‌ಸಿ 2021

( ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3337
2. ಸದಸ್ಯರ ಹೆಸರು : ಶ್ರೀ ಶ್ರೀನಿವಾಸ್ (ವಾಸು) ಎಸ್.ಆರ್
3. ಉತ್ತರಿಸಬೇಕಾದ ದಿನಾಂಕ : 23-03-2021

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಗುಬ್ಬಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಹಾಗಲವಾಡಿ ಕೆರೆ ಕಾಮಗಾರಿಯು ಪ್ರಗತಿಯಲ್ಲಿದ್ದು, ಈ ಕಾಮಗಾರಿಯನ್ನು ತುರ್ತಾಗಿ ಪೂರ್ಣಗೊಳಿಸಲು ಎಷ್ಟು ಕಾಲಾವಧಿ ಬೇಕಾಗುವುದು (ಸಂಪೂರ್ಣ ವಿವರ ನೀಡುವುದು) | ತುಮಕೂರು ಶಾಖಾ ನಾಲೆಯ ಕಿ.ಮೀ. 83.340 ರಿಂದ ನೀರನ್ನು ಎತ್ತಿ ಗುಬ್ಬಿ ತಾಲ್ಲೂಕು ಹಾಗಲವಾಡಿ ಮತ್ತು ಇತರೆ 35 ಗ್ರಾಮಗಳಿಗೆ ಕುಡಿಯುವ ನೀರನ್ನು ಒದಗಿಸುವ ಕಾಮಗಾರಿಯನ್ನು ದಿನಾಂಕ:31-12-2021 ರ ಒಳಗಾಗಿ ಪೂರ್ಣಗೊಳಿಸಲು ಉದ್ದೇಶಿಸಲಾಗಿದೆ. |
| ಆ | ಸದರಿ ಕಾಮಗಾರಿಯು ಮಂದಗತಿಯಲ್ಲಿ ಸಾಗಲು ಕಾರಣವೇನು ? (ವಿವರ ನೀಡುವುದು) | **ಸದರಿ ಯೋಜನೆಯಡಿ ಸಾಧಿಸಲಾದ ಭೌತಿಕ ಪ್ರಗತಿ ವಿವರಗಳು ಕೆಳಕಂಡಂತಿವೆ:-**<br>1. ಸದರಿ ಯೋಜನೆಯ ಇನ್‌ಲೆಟ್ ಸ್ಲೂಯಿಸ್ ಕಾಮಗಾರಿ, ಪಂಪ್ ಹೌಸ್ ಹಾಗೂ ಸಂಪ್ ನಿರ್ಮಾಣದ ಕಾಮಗಾರಿಗಳು ಪೂರ್ಣಗೊಂಡಿರುತ್ತವೆ.<br>2. 2850 ಮೀ ಉದ್ದದ 642 ಎಂಎಂ ವ್ಯಾಸದ ಎಂ.ಎಸ್.ರೈಸಿಂಗ್ ಮೇನ್ ಕಾಮಗಾರಿಯು ಪೂರ್ಣಗೊಂಡಿರುತ್ತದೆ.<br>3. 12.72 ಕಿ.ಮೀ ನಾಲಾ ಅಗೆತ ಕಾಮಗಾರಿಯು ಪೂರ್ಣಗೊಂಡಿದ್ದು, ಬಾಕಿ ಇರುವ 1.588 ಮೀ ನಾಲಾ ಅಗೆತ ಕಾಮಗಾರಿಯು ಭೂಸ್ವಾಧೀನ ಪ್ರಕ್ರಿಯೆಯ ವಿಳಂಬದಿಂದಾಗಿ ಬಾಕಿ ಇರುತ್ತದೆ.<br>4. 50 ಸಂಖ್ಯೆ ಅಡ್ಡಮೋರಿ ಕಾಮಗಾರಿಗಳಲ್ಲಿ 42 ಅಡ್ಡಮೋರಿ ಕಾಮಗಾರಿಗಳು ಪೂರ್ಣಗೊಂಡಿದ್ದು, 08 ಕಾಮಗಾರಿಗಳು ಭೂಸ್ವಾಧೀನ ಪ್ರಕ್ರಿಯೆಯಿಂದಾಗಿ ವಿಳಂಬವಾಗಿರುತ್ತದೆ.<br>5. ಪ್ರಸಕ್ತ ಸಾಲಿನಲ್ಲಿ 8ನೇ ಕಿ.ಮೀ ವರೆಗೆ ನೀರನ್ನು ಪ್ರಾಯೋಗಿಕವಾಗಿ ಹರಿಸಲಾಗಿರುತ್ತದೆ.<br>**ಸದರಿ ಕಾಮಗಾರಿಯ ವಿಳಂಬಕ್ಕೆ ಕಾರಣಗಳು ಕೆಳಕಂಡಂತಿವೆ:-**<br>1. ಭೂಸ್ವಾಧೀನ ಪ್ರಕ್ರಿಯೆ<br>2. ಗುಬ್ಬಿ ತಾಲ್ಲೂಕು, ಕಳ್ಳನಹಳ್ಳಿ ಗ್ರಾಮದ ಶ್ರೀ ಬಸವೇಶ್ವರ ದೇವಸ್ಥಾನದ ಪಕ್ಕದಲ್ಲಿ ನಾಲಾ ಪಂಕ್ತೀಕರಣದ ಬದಲಾವಣೆಯಿಂದಾಗಿ ಹಾಗೂ ಸದರಿ ಯೋಜನೆಯ, ಸರಪಳಿ 4.10 ಕಿ.ಮೀ ನಲ್ಲಿ (ಭೋಗಸಂದ್ರ ಗ್ರಾಮದ ಹತ್ತಿರ) ಮೂಲ ಯೋಜನಾ ವರದಿಯಲ್ಲಿ ಇಲ್ಲದೆ ಇದ್ದ 240.0 ಮೀ ಉದ್ದದ ಅಕ್ವಡಕ್ಟ್ ನಿರ್ಮಾಣದಿಂದಾಗಿ.<br>3. ಮಂಜೂರಾದ ಅಂದಾಜು ಪಟ್ಟಿಯಲ್ಲಿ ಮತ್ತು ಟೆಂಡರ್‌ನಲ್ಲಿ ಪರಿಗಣಿಸಲಾದ ಗಟ್ಟಿ ಶಿಲೆ ಮತ್ತು ಸ್ಫೋಟಸಹಿತ ಮೃದು ಶಿಲೆಗಳ ಅಗೆತಗಳ ಪರಿಮಾಣ ಮತ್ತು ಏರಿ ನಿರ್ಮಾಣದ ಪರಿಮಾಣಗಳಲ್ಲಿ ಉಂಟಾದ ವ್ಯತ್ಯಾಸಗಳಿಂದಾಗಿ.<br>4. ಯೋಜನೆಯ ಸರಪಳಿ 8.03 ಕಿ.ಮೀ ನಿಂದ 9.30 ಕಿ.ಮೀ ವರೆಗೆ ಹರದಗೆರೆ ಗ್ರಾಮದ ಹತ್ತಿರ ಮೂಲ ಯೋಜನಾ ವರದಿಯಲ್ಲಿ ಇಲ್ಲದೆ ಇರುವ ಅಕ್ವಡಕ್ಟ್ ನಿರ್ಮಿಸಲು ಉದ್ದೇಶಿಸಲಾಗಿರುವುದರಿಂದ. |

*ಸಂಖ್ಯೆ:ಜಸಂಇ 79 ಎನ್‌ಎಲ್‌ಎ 2021*

(ಸಹಿ)
(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3338
2. ಸದಸ್ಯರ ಹೆಸರು : ಶ್ರೀ ಶ್ರೀನಿವಾಸ್ (ವಾಸು) ಎಸ್.ಆರ್
3. ಉತ್ತರಿಸಬೇಕಾದ ದಿನಾಂಕ : 23-03-2021

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಗುಬ್ಬಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಮತದಹಳ್ಳ ಕೆರೆಗೆ ಸಂಬಂಧಪಟ್ಟಂತೆ ಕಾಮಗಾರಿಯ ಆರ್ಥಿಕ ಬಿಕ್ಕಟ್ಟನ್ನು ಸರ್ಕಾರ ಅನುಮೋದಿಸಿದೆಯೋ ; | ಹೇಮಾವತಿ ಯೋಜನೆ ತುಮಕೂರು ಶಾಖಾ ನಾಲೆ ಕಿ.ಮೀ 105.725 ರಿಂದ ಗುರುತ್ವಾಕರ್ಷಣ ಕೊಳವೆಗಳ ಮೂಲಕ ತುಮಕೂರು ಜಿಲ್ಲೆ ಗುಬ್ಬಿ ಮತ್ತು ಶಿರಾ ತಾಲ್ಲೂಕಿನ 42 ಗ್ರಾಮಗಳ ಕುಡಿಯುವ ನೀರಿನ ಬೇಡಿಕೆಯನ್ನು ಹಾಗಲವಾಡಿ ಹೋಬಳಿ ಮಂಚಲದೊರೆ ಗ್ರಾಮ ಪಂಚಾಯಿತಿ ವ್ಯಾಪ್ತಿಯ ಮತದಹಳ್ಳ ಮತ್ತು ಇತರೆ ಕೆರೆಗಳಿಗೆ ಕುಡಿಯುವ ನೀರನ್ನು ಪೂರೈಸುವ ರೂ.25.65 ಕೋಟಿ ಮೊತ್ತದ ಯೋಜನೆಯ ಕಾಮಗಾರಿಗೆ ದಿನಾಂಕ:08-03-2019 ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. |
| ಆ | ಆರ್ಥಿಕ ಬಿಕ್ಕಟ್ಟನ್ನು ಅನುಮೋದಿಸದೆ ಇದ್ದಲ್ಲಿ ಕಾರಣವೇನು ; | |
| ಇ | ಅನುಮೋದಿಸಿದ್ದರೆ, ಪ್ರಸ್ತುತ ಯಾವ ಹಂತದಲ್ಲಿದೆ ಮತ್ತು ಕಾಮಗಾರಿ ಪ್ರಾರಂಭ ಮಾಡಲು ಎಷ್ಟು ಸಮಯ ಬೇಕಾಗುವುದು ? (ಸಂಪೂರ್ಣ ವಿವರ ನೀಡುವುದು) | ತದನಂತರ, 2019-20ನೇ ಸಾಲಿನಲ್ಲಿ ಅತಿವೃಷ್ಟಿ ಪರಿಹಾರ ಕಾಮಗಾರಿಗಳಿಗಾಗಿ ಅನಿರೀಕ್ಷಿತ ಹಣದ ಅವಶ್ಯಕತೆ ಹಾಗೂ ಹಣಕಾಸಿನ ನಿರ್ಬಂಧದ ಹಿನ್ನೆಲೆಯಲ್ಲಿ, ಸದರಿ ಕಾಮಗಾರಿಯನ್ನು ರದ್ದುಗೊಳಿಸಲು ಆರ್ಥಿಕ ಇಲಾಖೆಯು ಸೂಚಿಸಿರುತ್ತದೆ.<br><br>ಪ್ರಸ್ತುತ, ಸದರಿ ಕುಡಿಯುವ ನೀರಿನ ಯೋಜನೆಯನ್ನು ಕೈಗೊಳ್ಳುವುದು ಅತ್ಯಾವಶ್ಯಕವಿರುವುದರಿಂದ ಟೆಂಡರ್ ಪ್ರಕ್ರಿಯೆಯನ್ನು ಮುಂದುವರೆಸಿ ಆರ್ಥಿಕ ಬಿಡ್‌ಗೆ ಅನುಮೋದನೆ ನೀಡುವಂತೆ ಕೋರಿ ಕಾವೇರಿ ನೀರಾವರಿ ನಿಗಮದಿಂದ ಪ್ರಸ್ತಾವನೆಯು ಸ್ವೀಕೃತವಾಗಿದ್ದು, ಪರಿಶೀಲನೆಯಲ್ಲಿದೆ. |

*ಸಂಖ್ಯೆ:ಜಸಂಇ 78 ಎಸ್‌ಎಲ್‌ಪಿ 2021*

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

## ಕರ್ನಾಟಕ ವಿಧಾನ ಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3339
2) ಸದಸ್ಯರ ಹೆಸರು : ಶ್ರೀ ರಾಮಲಿಂಗಾ ರೆಡ್ಡಿ (ಬಿ.ಟಿ.ಎಂ. ಲೇಔಟ್)
3) ಉತ್ತರಿಸುವ ದಿನಾಂಕ: : 23-03-2021
4) ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಪೆಟ್ರೋಲ್ ಮತ್ತು ಡೀಸೆಲ್ ಬೆಲೆ ಏರಿಕೆಯಿಂದಾಗಿ ನಾಗರೀಕರು ತೊಂದರೆಗೀಡಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯದಲ್ಲಿ ಪೆಟ್ರೋಲ್ ಮತ್ತು ಡೀಸೆಲ್ ಬೆಲೆ ಏರಿಕೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಪೆಟ್ರೋಲ್ ಮತ್ತು ಡೀಸೆಲ್ ಲೀಟರ್‌ಗೆ ರಾಜ್ಯ ಸರ್ಕಾರವು ವಿಧಿಸುತ್ತಿರುವ ತೆರಿಗೆ ಎಷ್ಟು; | ಪೆಟ್ರೋಲ್ ಮತ್ತು ಡೀಸೆಲ್‌ಗಳ ಮೇಲಿನ ಪ್ರಸ್ತುತ ತೆರಿಗೆ ದರ:<br>ಪೆಟ್ರೋಲ್ : 35% (ರೂ.23.54 ಪೈಸೆ) ಪ್ರತಿ ಲೀಟರ್‌ಗೆ<br>ಡೀಸೆಲ್ : 24% (ರೂ.16.28 ಪೈಸೆ) ಪ್ರತಿ ಲೀಟರ್‌ಗೆ |
| ಇ) | ಈ ತೆರಿಗೆಯನ್ನು ಕಡಿತಗೊಳಿಸಲು ಸರ್ಕಾರ ಉದ್ದೇಶಿಸಿದೆಯೇ? | ಪೆಟ್ರೋಲ್ ಮತ್ತು ಡೀಸೆಲ್‌ಗಳ ಬೆಲೆಯು ಮಾರುಕಟ್ಟೆ ಆಧಾರಿತವಾಗಿದ್ದು, ಅವುಗಳ ಮಾರಾಟದ ಬೆಲೆಯಲ್ಲಿ ದಿನೇದಿನೇ ಬದಲಾವಣೆಗಳಾಗುತ್ತಿದೆ. ಮೂಲ ಬೆಲೆಯಲ್ಲಿ ಹೆಚ್ಚಳವಾದಾಗ ಅವುಗಳ ಮಾರಾಟದ ತೆರಿಗೆ ಹೆಚ್ಚಳವಾಗುತ್ತದೆ. ದಕ್ಷಿಣದ ರಾಜ್ಯಗಳಿಗೆ ಹೋಲಿಸಿದಾಗ ಕೇರಳ ರಾಜ್ಯ ಹೊರತುಪಡಿಸಿದರೆ ಪೆಟ್ರೋಲ್ ಬೆಲೆಯು ಕರ್ನಾಟಕದಲ್ಲಿಯೇ ಕಡಿಮೆ ಇರುತ್ತದೆ. ಡೀಸೆಲ್ ಬೆಲೆಯು ದಕ್ಷಿಣದ ಇತರ ರಾಜ್ಯಗಳಿಗಿಂತ ಕರ್ನಾಟಕದಲ್ಲಿಯೇ ಅತೀ ಕಡಿಮೆ ಇರುತ್ತದೆ. |

ಸಂಖ್ಯೆ: ಆಇ 40 ಸಿಎಸ್‌ಎಲ್ 2021

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3402
2. ಮಾನ್ಯ ಸದಸ್ಯರ ಹೆಸರು : ಶ್ರೀ ಉಮಾನಾಥ ಎ.ಕೋಟ್ಯಾನ್ (ಮೂಡಬಿದ್ರೆ)
3. ಉತ್ತರಿಸುವ ದಿನಾಂಕ : 23-3-2021
4. ಉತ್ತರಿಸುವ ಸಚಿವರು : ಗೃಹ, ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಮಂಗಳೂರು ಮಹಾನಗರ ಪೊಲೀಸ್ ಕಮಿಷನರೇಟ್ ಕಾರ್ಯಾಲಯಕ್ಕೆ ಬೇಕಾಗುವ ಅತ್ಯಗತ್ಯ ಮೂಲಸೌಲಭ್ಯಗಳನ್ನು ಒದಗಿಸಿಕೊಡುವಲ್ಲಿ ಸರ್ಕಾರ ಕೈಗೊಂಡ ಕ್ರಮಗಳು ಯಾವುವು; | ಮಂಗಳೂರು ಮಹಾನಗರ ಪೊಲೀಸ್ ಕಮಿಷನರೇಟ್ ಕಾರ್ಯಾಲಯವು ಸ್ವಂತ ಕಟ್ಟಡದಲ್ಲಿ ಕಾರ್ಯ ನಿರ್ವಹಿಸುತ್ತಿರುತ್ತದೆ. ಕಾರ್ಯಾಲಯಕ್ಕೆ ಬೇಕಾಗುವ ಮೂಲ ಸೌಲಭ್ಯಗಳಾದ ಶುದ್ಧ ಕುಡಿಯುವ ನೀರಿನ ವ್ಯವಸ್ಥೆ, ವಾಹನ ನಿಲುಗಡೆಗೆ ಸ್ಥಳಾವಕಾಶ ಮತ್ತು ಪುರುಷರಿಗೆ ಮತ್ತು ಮಹಿಳೆಯರಿಗೆ ಪ್ರತ್ಯೇಕ ಶೌಚಾಲಯದ ವ್ಯವಸ್ಥೆಯಿರುತ್ತದೆ. |
| (ಆ) | ಪೊಲೀಸ್ ಇಲಾಖಾ ವ್ಯಾಪ್ತಿಯ ಅತಿ ಸೂಕ್ಷ್ಮ ಮತ್ತು ಸುರಕ್ಷತೆಯ ವಿವಿಧ ಮಜಲಿನಲ್ಲಿ ಚುರುಕಾಗಿ ಕಾರ್ಯನಿರ್ವಹಣೆ ಮಾಡುವಲ್ಲಿ ಆಧುನಿಕ ವ್ಯವಸ್ಥೆಗಳು ಮತ್ತು ಹೊಸ ವಾಹನಗಳೊಂದಿಗೆ, ಇಂಟರ್‌ಸೆಪ್ಟರ್ ವಾಹನಗಳು, ಮಾಬ್ ಕಂಟ್ರೋಲ್ ವಾಹನಗಳು, ಹೊಸ ಜೀಪು, ದ್ವಿಚಕ್ರವಾಹನಗಳನ್ನು ಹೊಂದಿರಬೇಕಾದುದು ಅವಶ್ಯಕವಾಗಿದ್ದು ಆ ಕುರಿತಾದ ಸುವ್ಯವಸ್ಥೆಯನ್ನು ಮಾಡುವಲ್ಲಿ ಸರ್ಕಾರದ ತುರ್ತು ಕ್ರಮಗಳೇನು; | ರಾಜ್ಯದ ಪೊಲೀಸ್ ಇಲಾಖೆಯಲ್ಲಿ ದಿನಾಂಕ:31-01-2021ರ ಅಂತ್ಯಕ್ಕೆ ಒಟ್ಟು 12594 ವಾಹನಗಳಿದ್ದು, ಅವುಗಳಲ್ಲಿ ಒಟ್ಟು 222 ಸಂಖ್ಯೆಯ ಇಂಟರ್‌ಸೆಪ್ಟರ್ ವಾಹನಗಳು, 37 ಸಂಖ್ಯೆಯ (ವಜ್ರ) ಮಾಬ್ ಕಂಟ್ರೋಲ್ ವಾಹನಗಳು, ಹಾಗೂ ಇಆರ್.ಎಸ್.ಎಸ್. ಸ್ಕಾರ್ಪಿಯೋ ವಾಹನಗಳು-239, ಹೊಯ್ಸಳ ಎರ್ಟಿಗಾ ವಾಹನ (ಬೆಂಗಳೂರು ನಗರ) – 274, ಹೈವೇ ಪಾಟ್ರೋಲ್ ಜೀಪ್- 300 ವಾಹನಗಳು ಲಭ್ಯವಿರುತ್ತವೆ. |
| (ಇ) | ಮಂಗಳೂರು ಕಮಿಷನರೇಟ್ ವ್ಯಾಪ್ತಿಯ ಗ್ರಾಮಾಂತರ ಪ್ರದೇಶಗಳು, ಘಟ್ಟ ಪ್ರದೇಶಗಳು, ನೆರೆ ರಾಜ್ಯಗಳ ಗಡಿ ಪ್ರದೇಶಗಳು, ಕರಾವಳಿ ಪ್ರದೇಶಗಳನ್ನು ಹೊಂದಿದ್ದು ಅತಿ ಸೂಕ್ಷ್ಮ ವಲಯ ಪ್ರದೇಶಗಳನ್ನು ಹೊಂದಿರುವುದರಿಂದ ಎಲ್ಲಾ ಮೂಲಸೌಲಭ್ಯಗಳನ್ನು ಒದಗಿಸಿಕೊಟ್ಟು ಕಾನೂನು ಸುವ್ಯವಸ್ಥೆಗೆ ಅನುಕೂಲ ಮಾಡಿಕೊಡುವ ಕುರಿತ ಸರ್ಕಾರದ ಕ್ರಮಗಳೇನು? | ಕಾನೂನು ಸುವ್ಯವಸ್ಥೆಗೆ ಅನುಕೂಲವಾಗುವಂತಹ ಎಲ್ಲಾ ಮೂಲಭೂತ ಸೌಲಭ್ಯಗಳಾದ ಇಲಾಖಾ ವಾಹನಗಳು, ತುರ್ತು ಸ್ಪಂದನ ವಾಹನಗಳು, ಚೆಕ್ ಪೋಸ್ಟ್ ವ್ಯವಸ್ಥೆ ಹಾಗೂ ಇನ್ನಿತರೆ ಸೌಲಭ್ಯಗಳನ್ನು ಒದಗಿಸಲಾಗಿರುತ್ತದೆ. |

**ಸಂಖ್ಯೆ:ಹೆಚ್‌ಡಿ 32 ಪಿಬಿಎಲ್ 2021**

(ಬಸವರಾಜ ಬೊಮ್ಮಾಯಿ)
ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು
ಹಾಗೂ ಶಾಸನ ರಚನಾ ಸಚಿವರು

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3403
2. ಮಾನ್ಯ ಸದಸ್ಯರ ಹೆಸರು : ಶ್ರೀ ಉಮಾನಾಥ ಎ.ಕೋಟ್ಯಾನ್ (ಮೂಡಬಿದ್ರೆ)
3. ಉತ್ತರಿಸುವ ದಿನಾಂಕ : 23-3-2021
4. ಉತ್ತರಿಸುವ ಸಚಿವರು : ಗೃಹ, ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಮೂಲ್ಕಿ/ಮೂಡಬಿದ್ರೆ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಮೂಡಬಿದಿರೆ, ಬಜಪೆ ಮತ್ತು ಮೂಲ್ಕಿ ಪೊಲೀಸ್ ಠಾಣೆಗಳು ಕರ್ತವ್ಯ ನಿರತವಾಗಿದ್ದು ಇವುಗಳ ಪೈಕಿ ಬಜಪೆ ಅಂತರಾಷ್ಟ್ರೀಯ ವಿಮಾನ ನಿಲ್ದಾಣ, ಬಹು ವಿಸ್ತೀರ್ಣದ ರಾಷ್ಟ್ರೀಯ ಮತ್ತು ರಾಜ್ಯ ಹೆದ್ದಾರಿಗಳನ್ನು ಒಳಗೊಂಡಿದ್ದು ಹಲವಾರು ಪ್ರಮುಖ ಧಾರ್ಮಿಕ ಮತ್ತು ಸಾಂಸ್ಕೃತಿಕ ಕೇಂದ್ರಗಳಿಗೆ ಸಂಪರ್ಕ ಕೊಂಡಿಯಾಗಿರುವುದರಿಂದ ಸಂಚಾರ ದಟ್ಟಣೆ ಮತ್ತು ಸುರಕ್ಷತೆ ನಿರ್ವಹಣೆಗಾಗಿ ಸಂಚಾರಿ ಪೊಲೀಸ್ ಠಾಣೆಯು ಅತ್ಯಾವಶ್ಯವಾಗಿದ್ದು ಸದರಿ ವ್ಯವಸ್ಥೆಗೆ ಸರ್ಕಾರದ ತುರ್ತು ಕ್ರಮಗಳು ಯಾವುವು; | ಪ್ರಸ್ತಾವನೆಯನ್ನು ಮುಂದಿನ ಆರ್ಥಿಕ ವರ್ಷದಲ್ಲಿ ಪರಿಶೀಲಿಸಲಾಗುವುದು. |
| (ಆ) | ಬಹಳಷ್ಟು ಸಣ್ಣ, ಮಧ್ಯಮ ಮತ್ತು ಬೃಹತ್ ಕೈಗಾರಿಕಾ ಸಂಸ್ಥೆಗಳು ಕೂಡ ಕ್ಷೇತ್ರ ವ್ಯಾಪ್ತಿಗೆ ಬರುತ್ತಿದ್ದು ಸಂಚಾರಿ ಸುವ್ಯವಸ್ಥೆಗೆ ಮೂಡಬಿದ್ರೆಯಲ್ಲಿ ಸಂಚಾರಿ ಪೊಲೀಸ್ ಠಾಣೆಯನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿಯೇ ಪ್ರಾರಂಭಿಸಿ ಅನುಕೂಲ ಮಾಡಿಕೊಡಲು ಸರ್ಕಾರದ ಕ್ರಮಗಳೇನು; | |
| (ಇ) | ಮಾರಣಾಂತಿಕ ಅಪಘಾತಗಳು, ಸಾಮಾನ್ಯ ಅಪಘಾತಗಳು, ಸಂಚಾರ ನಿಯಂತ್ರಣ ಉಲ್ಲಂಘನೆಗೆ ಕಡಿವಾಣ ಹಾಕಲು ಸಂಚಾರಿ ಪೊಲೀಸ್ ಠಾಣೆ ಅಗತ್ಯವಾಗಿದ್ದು ಸಾರ್ವಜನಿಕ ಸುರಕ್ಷತೆ ದಿಶೆಯಲ್ಲಿ ಸರ್ಕಾರದ ನೂತನ ಸಂಚಾರಿ ಪೊಲೀಸ್ ಠಾಣೆಯನ್ನು ಪ್ರಾರಂಭಿಸಿ ಸಾರ್ವಜನಿಕರಿಗೆ ಸಂಚಾರ ಸುವ್ಯವಸ್ಥೆಯನ್ನು ಒದಗಿಸಿಕೊಡುವುದೇ? | ಪ್ರಸ್ತುತ ಸಂಚಾರ ನಿಯಂತ್ರಣ ಮತ್ತು ಸಂಚಾರ ಅಪಘಾತಗಳಿಗೆ ಸಂಬಂಧಿಸಿದಂತೆ ಸಂಬಂಧಪಟ್ಟ ಮೂಡಬಿದ್ರೆ ಪೊಲೀಸ್ ಠಾಣೆಯಿಂದ ಅಗತ್ಯ ಕ್ರಮಗಳನ್ನು ತೆಗೆದುಕೊಳ್ಳಲಾಗುತ್ತಿದೆ. |

**ಸಂಖ್ಯೆ:ಹೆಚ್‌ಡಿ 54 ಪಿಓಪಿ 2021**

(ಬಸವರಾಜ ಬೊಮ್ಮಾಯಿ)
ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು
ಹಾಗೂ ಶಾಸನ ರಚನಾ ಸಚಿವರು

**ಕರ್ನಾಟಕ ವಿಧಾನಸಭೆ**

1] ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3404

2] ಮಾನ್ಯ ಸದಸ್ಯರ ಹೆಸರು : ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ)

3] ಉತ್ತರಿಸುವ ದಿನಾಂಕ : 23.03.2021

4] ಉತ್ತರಿಸುವ ಸಚಿವರು : ಗೃಹ, ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮಂಗಳೂರು ಪೊಲೀಸ್ ಕಮಿಷನರೇಟ್ ವ್ಯಾಪ್ತಿಗೆ ಬರುವ ಮೂಡಬಿದರೆ, ಮೂಲ್ಕಿ ಮತ್ತು ಬಜಪೆ ಪೊಲೀಸ್ ಸಿಬ್ಬಂದಿ ವರ್ಗದವರಿಗೆ ಮನೆ ಬಾಡಿಗೆ ಭತ್ಯೆ ವಿಚಾರದಲ್ಲಿ ತಾರತಮ್ಯವಾಗುತ್ತಿರುವುದನ್ನು ಸರ್ಕಾರ ಗಮನಿಸಿದೆಯೇ; | ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 06 ಎಸ್‌ಆರ್‌ಪಿ 2018, ದಿನಾಂಕ: 19.04.2018 ರನ್ವಯ 05 ಲಕ್ಷಕ್ಕಿಂತ ಕಡಿಮೆ ಜನಸಂಖ್ಯೆ ಇರುವ ನಗರ/ ಪ್ರದೇಶಗಳನ್ನು 'ಸಿ' ವರ್ಗವೆಂದು ಪರಿಗಣಿಸಿ ಮೂಲ ವೇತನದ ಶೇ.8% ರಷ್ಟು ಮನೆ ಬಾಡಿಗೆ ಭತ್ಯೆಯನ್ನು ನಿಗದಿಪಡಿಸಲಾಗಿರುತ್ತದೆ.<br><br>ಮಂಗಳೂರು ಪೊಲೀಸ್ ಕಮೀಷನರೇಟ್ ವ್ಯಾಪ್ತಿಗೆ ಬರುವ ಮೂಡಬಿದ್ರೆ, ಮುಲ್ಕಿ ಮತ್ತು ಬಜಪೆ ಪೊಲೀಸ್ ಠಾಣೆಗಳ ಅಧಿಕಾರಿ/ ಸಿಬ್ಬಂದಿ ವರ್ಗದವರಿಗೆ ಶೇ. 8% ರಷ್ಟು ಮನೆ ಬಾಡಿಗೆ ಭತ್ಯೆ ನೀಡಲಾಗುತ್ತಿದೆ. |
| ಆ) | ಹಾಗಿದ್ದಲ್ಲಿ, ಜನರ ಸುಭದ್ರತೆ ಕಾಪಾಡುವ ಹೊಣೆಗಾರಿಕೆಯನ್ನು ನಿರ್ವಹಿಸುವ ಸದರಿ ಸಿಬ್ಬಂದಿ ವರ್ಗದವರಿಗೆ ಕಮಿಷನರೇಟ್ ವ್ಯಾಪ್ತಿಗೆ ಅನ್ವಯಿಸುವ ಭತ್ಯೆಯನ್ನು ಒದಗಿಸಿಕೊಟ್ಟ ತಾರತಮ್ಯ ನಿವಾರಿಸಲು ಸರ್ಕಾರದ ಕ್ರಮಗಳೇನು; | |
| ಇ) | ಮನೆ ಬಾಡಿಗೆ ಭತ್ಯೆಯಲ್ಲಿ ಹೆಚ್ಚಿನ ಪ್ರಮಾಣದ ವ್ಯತ್ಯಾಸ ಇರುವುದನ್ನು ಗಮನಿಸಿ ನ್ಯಾಯೋಜಿತವಾದ ಭತ್ಯೆ ಮಂಜೂರು ಮಾಡುವಲ್ಲಿ ಕಾನೂನು ನಿಯಮಗಳಡಿಯಲ್ಲಿ ಕ್ರಮ ಜರುಗಿಸಿ ಸೌಲಭ್ಯ ವಂಚಿತರಿಗೆ ಅನುಕೂಲ ಮಾಡಲಾಗುವುದೇ; | |
| ಈ) | ಮಂಗಳೂರು ಕಮಿಷನರೇಟ್ ವ್ಯಾಪ್ತಿಯ ಬಹುವಿಧ ಸುರಕ್ಷತಾ ವ್ಯವಸ್ಥೆಯನ್ನು ಹೊಂದಿರಬೇಕಾಗಿದ್ದು ಇಲ್ಲಿ ಶ್ರಮಿಸುತ್ತಿರುವ ಸಿಬ್ಬಂದಿ ವರ್ಗದವರಿಗೆ ಇಲಾಖಾ ವತಿಯಿಂದ ಎಲ್ಲಾ ಮೂಲಸೌಲಭ್ಯಗಳು ಮತ್ತಿತರ ಅವಶ್ಯಕ ಸೌಕರ್ಯಗಳನ್ನು ವ್ಯವಸ್ಥೆಗೊಳಿಸಲು ಇಲಾಖೆಯವರು ಸಕಾಲಿಕ ಕ್ರಮಗಳನ್ನು ಕೈಗೊಳ್ಳಲು ಸರ್ಕಾರದ ಕ್ರಮಗಳೇನು? | ಮಂಗಳೂರು ನಗರ ಪೊಲೀಸ್ ಕಮೀಷನರೇಟ್ ವ್ಯಾಪ್ತಿಯ ಎಲ್ಲಾ ಪೊಲೀಸ್ ಠಾಣೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ/ ಸಿಬ್ಬಂದಿಗಳಿಗೆ ಮೂಲಭೂತ ಸೌಕರ್ಯಗಳಾದ ಶುದ್ಧ ಕುಡಿಯುವ ನೀರಿನ ವ್ಯವಸ್ಥೆ ,ವಸತಿ ಗೃಹಗಳ ವ್ಯವಸ್ಥೆ ಮತ್ತು ಠಾಣೆಗಳಲ್ಲಿ ಪುರುಷ ಮತ್ತು ಮಹಿಳಾ ಸಿಬ್ಬಂದಿಗಳಿಗೆ ಪ್ರತ್ಯೇಕವಾದ ವಿಶ್ರಾಂತಿ ಗೃಹಗಳ ಹಾಗೂ ಶೌಚಾಲಯಗಳ ವ್ಯವಸ್ಥೆಯನ್ನು ಕಲ್ಪಿಸಲಾಗಿರುತ್ತದೆ. |

**ಹೆಚ್‌ಡಿ 42 ಇಎಫ್‌ಎಸ್ 2021**

[ಬಸವರಾಜ ಬೊಮ್ಮಾಯಿ]
ಗೃಹ, ಕಾನೂನು, ಸಂಸದೀಯ ವ್ಯವಹಾರಗಳು
ಮತ್ತು ಶಾಸನ ರಚನೆ ಸಚಿವರು

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3406
2. ಸದಸ್ಯರ ಹೆಸರು : ಶ್ರೀ ಸುರೇಶ್‌ಗೌಡ
3. ಉತ್ತರಿಸಬೇಕಾದ ದಿನಾಂಕ : 23-03-2021

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ನಾಗಮಂಗಲ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ನೀರಾವರಿ ಅಭಿವೃದ್ಧಿಗಾಗಿ ಕಾವೇರಿ ನೀರಾವರಿ ನಿಗಮದಿಂದ ರೈತರ ಜಮೀನನ್ನು ಸ್ವಾಧೀನ ಪಡಿಸಿಕೊಂಡು ದರ ನಿಗದಿ ಮಾಡಿದ್ದರೂ ರೈತರಿಗೆ ಇಲ್ಲಿಯವರೆಗೆ ಅನುದಾನ ನೀಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ನಾಗಮಂಗಲ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ನೀರಾವರಿ ಅಭಿವೃದ್ಧಿಗಾಗಿ 23 ಗ್ರಾಮಗಳಿಂದ 76-23 ಎಕರೆ ಜಮೀನನ್ನು ನೇರ ಖರೀದಿ ಮೂಲಕ ಸ್ವಾಧೀನಪಡಿಸಿಕೊಳ್ಳಲು ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ ರವರು ದಿನಾಂಕ:30-05-2017, 17-02-2018, 19-01-2019 ಹಾಗೂ 23-07-2019 ರಲ್ಲಿ ದರ ನಿರ್ಧರಣಾ ಸಲಹಾ ಸಮಿತಿ ಸಭೆ ನಡೆಸಿ, ದರ ನಿಗದಿಪಡಿಸಿದ್ದು, ಅದರನ್ವಯ ರೂ.8,65,53,885/- ಗಳ ಅನುದಾನದ ಅವಶ್ಯಕತೆ ಇದ್ದು, ಈ ಪೈಕಿ ಡಿಸೆಂಬರ್ 2020 ರ ಮಾಹೆಯಲ್ಲಿ ರೂ.1.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.<br><br>ಮೇಲ್ಕಂಡ ಗ್ರಾಮಗಳ ವ್ಯಾಪ್ತಿಯ ಜಮೀನುಗಳ ನೇರ ಖರೀದಿ ಪ್ರಕರಣಗಳಿಗೆ ಅವಶ್ಯವಿರುವ ಬಾಕಿ ಮೊತ್ತವನ್ನು ಮಾರ್ಚ್ 2021 ಮಾಹೆಯಲ್ಲಿ ಆದ್ಯತೆ ಮೇಲೆ ಬಿಡುಗಡೆ ಮಾಡಲಾಗುವುದು. |
| ಆ | ಬಂದಿದ್ದಲ್ಲಿ, ಯಾವ ಕಾಲ ಮಿತಿಯೊಳಗೆ ಈ ಅನುದಾನ ಮಂಜೂರು ಮಾಡಲು ಸರ್ಕಾರ ಕ್ರಮ ಕೈಗೊಳ್ಳುವುದು? | |

*ಸಂಖ್ಯೆ:ಜಸಂಇ 76 ಎನ್‌ಎಲ್‌ಎ 2021*

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

## ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3407 |
| ಸದಸ್ಯರ ಹೆಸರು | : | ಶ್ರೀ ಸುರೇಶ್ ಗೌಡ (ನಾಗಮಂಗಲ) |
| ಉತ್ತರಿಸಬೇಕಾದ ದಿನಾಂಕ | : | 23.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| | ಪ್ರಶ್ನೆ | ಉತ್ತರ |
|---|---|---|
| ಅ) | ನಾಗಮಂಗಲ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಎಷ್ಟು ಗ್ರಾಮಗಳಲ್ಲಿ ನಿರಂತರ ಜ್ಯೋತಿ ಯೋಜನೆ ಅಳವಡಿಸಲಾಗಿದೆ; | ನಾಗಮಂಗಲ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ 538 ಗ್ರಾಮಗಳಿದ್ದು, ಇವುಗಳಲ್ಲಿ ನಿರಂತರ ಜ್ಯೋತಿ ಫೇಸ್-1 ಅಡಿಯಲ್ಲಿ 362 ಗ್ರಾಮಗಳಿಗೆ ಹಾಗೂ ಡಿ.ಡಿ.ಯು.ಜಿ.ಜೆ.ವೈ. ಅಡಿಯಲ್ಲಿ 170 ಗ್ರಾಮಗಳಿಗೆ ಒಟ್ಟು 532 ಗ್ರಾಮಗಳಿಗೆ ನಿರಂತರ ವಿದ್ಯುತ್ ಸರಬರಾಜು ನೀಡಲಾಗಿರುತ್ತದೆ. |
| ಆ) | ಈ ಕ್ಷೇತ್ರದ ಬೆಳ್ಳೂರು ಹೋಬ್ಳಳಿ ವ್ಯಾಪ್ತಿಯ ಅಂಕನಹಳ್ಳಿ, ಕವಲುಗುಂದಿ, ಹೊಸೂರು, ದೊಡ್ಡಗುಣಿ, ಶಿವನಹಳ್ಳಿ, ಕತ್ರಗುಪ್ಪೆ ಗ್ರಾಮಗಳನ್ನು ನಿರಂತರ ಜ್ಯೋತಿ ಯೋಜನೆಯಿಂದ ಹೊರತು ಪಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಳ್ಳೂರು ಹೋಬಳಿಯ ಅಂಕನಹಳ್ಳಿ, ಕವಲಗುಂದಿ, ಹೊಸೂರು, ದೊಡ್ಡಗುಣಿ, ಶಿವನಹಳ್ಳಿ, ಕತ್ರಗುಪ್ಪೆ ಗ್ರಾಮಗಳಿಗೆ ನಿರಂತರ ವಿದ್ಯುತ್ ಸಂಪರ್ಕ ಕಲ್ಪಿಸಲು ಡಿಡಿಯುಜಿಜೆವೈ ಅಡಿಯಲ್ಲಿ ಮೈಲಾರಪಟ್ಟಣ ಫೀಡರ್ ಅನ್ನು ಪ್ರಸ್ತಾಪಿಸಲಾಗಿತ್ತು. ಆದರೆ, ಯೋಜನೆಯ ಅವಧಿ ಪೂರ್ಣಗೊಂಡಿದ್ದರಿಂದ ಸದರಿ ಗ್ರಾಮಗಳಲ್ಲಿ ಯೋಜನೆಯ ಕಾಮಗಾರಿಗಳನ್ನು ಕೈಗೊಳ್ಳಲು ಸಾಧ್ಯವಾಗಿರುವುದಿಲ್ಲ. |
| ಇ) | ಈ ಗ್ರಾಮಗಳನ್ನು ಈ ಯೋಜನೆಯಿಂದ ಹೊರತು ಪಡಿಸಲು ಕಾರಣವೇನು; | |
| ಈ) | ಈ ಗ್ರಾಮಗಳನ್ನು ನಿರಂತರ ಜ್ಯೋತಿ ಯೋಜನೆ ವ್ಯಾಪ್ತಿಗೆ ತರಲು ಸರ್ಕಾರ ಕ್ರಮ ಕೈಗೊಳ್ಳುವುದೇ? | ಬೆಳ್ಳೂರು ಹೋಬಳಿಯ ಅಂಕನಹಳ್ಳಿ ಕವಲಗುಂದಿ, ಹೊಸೂರು, ದೊಡ್ಡಗುಣಿ, ಶಿವನಹಳ್ಳಿ, ಕತ್ರಗುಪ್ಪೆ ಗ್ರಾಮಗಳಿಗೆ ಹೊಸದಾಗಿ ವಡೆರಹಳ್ಳಿ ವಿದ್ಯುತ್ ಉಪಕೇಂದ್ರದಿಂದ ಹೊಸ ಫೀಡರ್ ನಿರ್ಮಿಸಲು ಅಂದಾಜುಪಟ್ಟಿ ತಯಾರಿಸಲಾಗಿರುತ್ತದೆ.<br><br>ಸದರಿ ಕಾಮಗಾರಿಗಳನ್ನು ಕೈಗೆತ್ತಿಕೊಂಡು ಶೀಘ್ರವಾಗಿ ಪೂರ್ಣಗೊಳಿಸಲು ಎಲ್ಲಾ ಅಗತ್ಯ ಕ್ರಮಗಳನ್ನು ಕೈಗೊಳ್ಳಲಾಗುತ್ತದೆ. |

**ಸಂಖ್ಯೆ: ಎನರ್ಜಿ 116 ಪಿಪಿಎಂ 2021**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3413 |
| ಸದಸ್ಯರ ಹೆಸರು | : | ಶ್ರೀ ಅಖಂಡ ಶ್ರೀನಿವಾಸಮೂರ್ತಿ ಆರ್. (ಪುಲಿಕೇಶಿ ನಗರ) |
| ಉತ್ತರಿಸಬೇಕಾದ ದಿನಾಂಕ | : | 23-03-2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

****

| ಕ್ರಮ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪುಲಿಕೇಶಿನಗರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ವಾರ್ಡ್ ಸಂಖ್ಯೆ 60, ಸಗಾಯಪುರಂನಲ್ಲಿ ಜಲ ಸಂಗ್ರಹಗಾರ (GLR) ನಿರ್ಮಿಸಲು ಸ್ಥಳವನ್ನು ಬೆಂಗಳೂರು ಜಲಮಂಡಳಿಯವರು ಗುರುತಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ; | ಪುಲಿಕೇಶಿನಗರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಕುಡಿಯುವ ನೀರಿನ ಕೊರತೆಯನ್ನು ನೀಗಿಸಲು ವಾರ್ಡ್ ಸಂಖ್ಯೆ 60 ಸಗಾಯಪುರಂನಲ್ಲಿ ಜಲಸಂಗ್ರಹಗಾರ (GLR) ನಿರ್ಮಿಸಲು ಫುಟ್ಬಾಲ್ ಕ್ರೀಡಾಂಗಣದಲ್ಲಿನ ಜಾಗವನ್ನು ಬೆಂಗಳೂರು ಜಲಮಂಡಳಿಯಿಂದ ಗುರುತಿಸಲಾಗಿರುತ್ತದೆ. |
| ಆ) | ಬಂದಿದ್ದಲ್ಲಿ, ಈ ಕ್ಷೇತ್ರದ ಸುಮಾರು 6 ಲಕ್ಷ ಜನರಿಗೆ ಕುಡಿಯುವ ನೀರಿನ ಸಮಸ್ಯೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪುಲಿಕೇಶಿನಗರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ವಾರ್ಡ್‌ಗಳಲ್ಲಿ ಕುಡಿಯುವ ನೀರಿನ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಇ) | ಹಾಗಿದ್ದಲ್ಲಿ, ಬದಲಿ ಜಾಗವು ಇಲ್ಲದೇ ಇರುವುದರಿಂದ, ಬೆಂಗಳೂರು ಜಲಮಂಡಳಿಯವರು ಗುರುತಿಸಿರುವ ಜಾಗವನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ ಬಿ.ಬಿ.ಎಂ.ಪಿ ವತಿಯಿಂದ ಸದರಿ ಜಾಗವನ್ನು ಬೆಂಗಳೂರು ಜಲಮಂಡಳಿಯವರಿಗೆ ಹಸ್ತಾಂತರಿಸಲಾಗುವುದೇ? | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ್ ಸಂಖ್ಯೆ:60 ಸಗಾಯಪುರಂ ವಾರ್ಡ್ ಫುಟ್‌ಬಾಲ್ ಆಟದ ಮೈದಾನದಲ್ಲಿನ ಉಳಿಕೆ ಸ್ಥಳ ಸುಮಾರು 1760 ಚದರ ಮೀಟರ್ ವ್ಯಾಪ್ತಿಯ ಪ್ರದೇಶವನ್ನು ಬೆಂಗಳೂರು ನೀರು ಮತ್ತು ಒಳಚರಂಡಿ ಮಂಡಳಿಗೆ ಉಚಿತವಾಗಿ ಹಸ್ತಾಂತರಿಸುಂತೆ ಬೆಂಗಳೂರು ಜಲಮಂಡಳಿಯಿಂದ ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಇವರಿಗೆ ಕೋರಲಾಗಿರುತ್ತದೆ.<br><br>ಆದರೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ಬಿ.ಬಿ.ಎಂ.ಪಿ ವ್ಯಾಪ್ತಿಗೆ ಬರುವ ಆಟದ ಮೈದಾನ ಮತ್ತು ಉದ್ಯಾನವನ ಹಾಗೂ ತೆರೆದ ಪ್ರದೇಶಗಳ (Preservation & Regulation) ಕಾಯ್ದೆ 1985 ರನ್ವಯ ಪ್ರಸ್ತಾಪಿತ ಪ್ರದೇಶವನ್ನು ನಿರ್ಧಿಷ್ಟ ಉದ್ದೇಶಕ್ಕೆ ಹೊರತುಪಡಿಸಿ ಇತರೆ ಉಪಯೋಗದ ಉದ್ದೇಶಕ್ಕೆ ಪ್ರತಿಬಂಧಿಸಲಾಗಿರುವುದರಿಂದ ಬೆಂಗಳೂರು ಜಲಮಂಡಳಿಯು ಪ್ರಸ್ತಾಪಿಸಿರುವ ಉದ್ದೇಶಕ್ಕೆ ಜಾಗ ನೀಡಲು ಅವಕಾಶವಿರುವುದಿಲ್ಲವೆಂದು ತಿಳಿಸಿರುತ್ತದೆ.<br><br>ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ವತಿಯಿಂದ ಸದರಿ ಫುಟ್‌ಬಾಲ್ ಕ್ರೀಡಾಂಗಣದ ಜಾಗದ ಬದಲಿಗೆ ಪರ್ಯಾಯ ಸ್ಥಳವನ್ನು ಉಚಿತವಾಗಿ ಹಸ್ತಾಂತರಿಸಿದಲ್ಲಿ, ಸಾರ್ವಜನಿಕರಿಗೆ ಕುಡಿಯುವ ನೀರಿನ ಸಮಸ್ಯೆಯನ್ನು ನೀಗಿಸಲು ವಾರ್ಡ್ ಸಂಖ್ಯೆ:60, ಸಗಾಯಪುರಂನಲ್ಲಿ ಜಲಸಂಗ್ರಹಗಾರ (GLR) ನಿರ್ಮಿಸಲು ತುರ್ತಾಗಿ ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ: ನಅಇ 50 ಎಂಎಸ್‌ಐ 2021

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3416 |
| ಸದಸ್ಯರ ಹೆಸರು | : | ಶ್ರೀ ರಂಗನಾಥ್ ಹೆಚ್.ಡಿ. ಡಾ॥ (ಕುಣಿಗಲ್) |
| ಉತ್ತರಿಸಬೇಕಾದ ದಿನಾಂಕ | : | 23.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| | ಪ್ರಶ್ನೆ | ಉತ್ತರ |
|---|---|---|
| ಅ) | ಕುಣಿಗಲ್ ತಾಲ್ಲೂಕಿನ ಸುಮಾರು 41 ಗ್ರಾಮದಲ್ಲಿ ನಿರಂತರ ವಿದ್ಯುತ್ ಸಂಪರ್ಕವಿಲ್ಲದೇ ಸಾರ್ವಜನಿಕರು ತುಂಬಾ ತೊಂದರೆಗೊಳಗಾಗಿದ್ದು, ಈ ಗ್ರಾಮದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಾಸವಿರುವ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಹಲವು ಕುಟುಂಬಗಳು ನಿರಂತರ ವಿದ್ಯುತ್ ಸಂಪರ್ಕ ಇಲ್ಲದೇ ಸೌಲಭ್ಯ ವಂಚಿತರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯ ಕುಣಿಗಲ್ ತಾಲ್ಲೂಕಿನ ಗ್ರಾಮೀಣ ಪ್ರದೇಶಗಳಲ್ಲಿ ದಿನವಹಿ ಸುಮಾರು 22 ರಿಂದ 23 ಗಂಟೆಗಳ ಕಾಲಾವಧಿಯವರೆವಿಗೆ ನಿರಂತರ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ ಹಾಗೂ ಕೃಷಿ ಚಟುವಟಿಕೆಗಳಿಗಾಗಿ ದಿನವಹಿ 7 ಗಂಟೆಗಳ ಅವಧಿಗೆ 3 ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ.<br>ಕುಣಿಗಲ್ ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ ಎಲ್ಲಾ ಗ್ರಾಮಗಳಿಗೆ ನಿರಂತರ ಜ್ಯೋತಿ ಯೋಜನೆಯಡಿಯಲ್ಲಿ ವಿದ್ಯುತ್ ಸಂಪರ್ಕ ಕಲ್ಪಿಸಲಾಗಿದ್ದು ಇದರಲ್ಲಿ ಪರಿಶಿಷ್ಟ ಸಮುದಾಯ ಮತ್ತು ಹಿಂದುಳಿದ ವರ್ಗಗಳ ಸಮುದಾಯದ ಮನೆಗಳು ಸಹ ಸೇರಿರುತ್ತವೆ.<br>ನಿರಂತರ ಜ್ಯೋತಿ ಯೋಜನೆಯಡಿಯಲ್ಲಿ ಈಗಾಗಲೇ ವಿದ್ಯುತ್ ಸಂಪರ್ಕ ಕಲ್ಪಿಸಿರುವ 41 ಗ್ರಾಮಗಳಲ್ಲಿ ಇತ್ತೀಚಿಗೆ ಅಭಿವೃದ್ಧಿ ಹೊಂದಿರುವ ಪ್ರದೇಶಗಳಿಗೆ (ರಸ್ತೆಯ ಬದಿಯಲ್ಲಿರುವ ಮನೆಗಳಿಗೆ) ನಿರಂತರ ವಿದ್ಯುತ್ ಸಂಪರ್ಕ ಕಲ್ಪಿಸಲು ಪ್ರತ್ಯೇಕ ಅಂದಾಜು ಪಟ್ಟಿ ತಯಾರಿಸಿದ್ದು ಈ ಪ್ರಸ್ತಾವನೆಯಲ್ಲಿ ಪರಿಶಿಷ್ಟ ಸಮುದಾಯ ಮತ್ತು ಹಿಂದುಳಿದ ವರ್ಗಗಳ ಸಮುದಾಯದ ಮನೆಗಳು ಸಹ ಸೇರಿರುತ್ತವೆ. |
| ಆ) | ಕುಣಿಗಲ್ ತಾಲ್ಲೂಕಿನಲ್ಲಿ ನಿರಂತರ ವಿದ್ಯುತ್ ಸಂಪರ್ಕವಿಲ್ಲದೇ ಇರುವ ಎಲ್ಲಾ ಗ್ರಾಮಗಳಿಗೂ ಸಹ ನಿರಂತರ ವಿದ್ಯುತ್ ಸಂಪರ್ಕ ಕಲ್ಪಿಸಲು ಸುಮಾರು ರೂ.80.00 ಲಕ್ಷಗಳ ಅನುದಾನದ ಅವಶ್ಯಕತೆ ಇದ್ದು, ಈ ಅನುದಾನವನ್ನು ಯಾವಾಗ ಬಿಡುಗಡೆ ಮಾಡಲಾಗುವುದು; ಯಾವ ಕಾಲಮಿತಿಯಲ್ಲಿ ವಿದ್ಯುತ್ ಸಂಪರ್ಕ ಕಲ್ಪಿಸಲಾಗುವುದು? (ವಿವರ ನೀಡುವುದು) | ಕುಣಿಗಲ್ ತಾಲ್ಲೂಕು ವ್ಯಾಪ್ತಿಯಲ್ಲಿ ನಿರಂತರ ಜ್ಯೋತಿ ಯೋಜನೆಯಡಿ ಎಲ್ಲಾ ಕಾಮಗಾರಿಗಳನ್ನು ಈಗಾಗಲೇ ಪೂರ್ಣಗೊಳಿಸಿ ಅನುಷ್ಠಾನಗೊಳಿಸಲಾಗಿರುತ್ತದೆ.<br>ಸದರಿ ಯೋಜನೆಯಡಿಯಲ್ಲಿ ಈಗಾಗಲೇ ಎಲ್ಲಾ ಗ್ರಾಮಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲಾಗಿದ್ದು, ಇತ್ತೀಚಿಗೆ ಅಭಿವೃದ್ಧಿ ಹೊಂದಿರುವ ಪ್ರದೇಶಗಳಿಗೆ (ರಸ್ತೆಯ ಬದಿಯಲ್ಲಿರುವ ಮನೆಗಳಿಗೆ) ನಿರಂತರ ವಿದ್ಯುತ್ ಸಂಪರ್ಕ ಕಲ್ಪಿಸಲು ಪ್ರತ್ಯೇಕ ಅಂದಾಜು ಪಟ್ಟಿ ತಯಾರಿಸಿದ್ದು, ಪ್ರಸ್ತಾವನೆಯನ್ನು ಪರಿಶೀಲಿಸಿ ಮುಂದಿನ ಕ್ರಮ ಕೈಗೊಳ್ಳಲಾಗುವುದು. |

**ಸಂಖ್ಯೆ: ಎನರ್ಜಿ 117 ಪಿಪಿಎಂ 2021**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3417
2. ಸದಸ್ಯರ ಹೆಸರು : ಶ್ರೀ ತನ್ವೀರ್ ಸೇಠ್
3. ಉತ್ತರಿಸಬೇಕಾದ ದಿನಾಂಕ : 23-03-2021.
4. ಉತ್ತರಿಸುವ ಸಚಿವರು : ಸಣ್ಣ ನೀರಾವರಿ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಮೈಸೂರು ನಗರ ವ್ಯಾಪ್ತಿಯಲ್ಲಿರುವ 5 ಕೆರೆಗಳನ್ನು (ಕಾರಂಜಿ ಕೆರೆ, ಹೆಬ್ಬಾಳ್ ಕೆರೆ, ಕುಕ್ಕರಹಳ್ಳಿ ಕೆರೆ, ದೇವನೂರು ಕೆರೆ ಹಾಗೂ ಲಿಂಗಾಂಬುದಿ ಕೆರೆ) ಪ್ರವಾಸಿ ತಾಣವಾಗಿ ಅಭಿವೃದ್ಧಿ ಪಡಿಸುವ ಯೋಜನೆ ಸರ್ಕಾರದ ಮುಂದಿದೆಯೇ; ಇದ್ದಲ್ಲಿ ವಿವರವನ್ನು ನೀಡುವುದು; | ಮೈಸೂರು ನಗರ ವ್ಯಾಪ್ತಿಯಲ್ಲಿರುವ ಕಾರಂಜಿ ಕೆರೆಯು ಶ್ರೀ ಚಾಮುಂಡೇಶ್ವರಿ ಮೃಗಾಲಯ ವ್ಯಾಪ್ತಿಗೆ, ಹೆಬ್ಬಾಳ್ ಕೆರೆಯು ಕೆ.ಐ.ಎ.ಡಿ.ಬಿ. ವ್ಯಾಪ್ತಿಗೆ, ಕುಕ್ಕರಹಳ್ಳಿ ಕೆರೆಯು ಮೈಸೂರು ವಿಶ್ವವಿದ್ಯಾಲಯ ಹಾಗೂ ದೇವನೂರು ಕೆರೆಗಳು ಜಿಲ್ಲಾ ಪಂಚಾಯತ್ ವ್ಯಾಪ್ತಿಗೆ ಒಳಪಡುತ್ತವೆ. ಸದರಿ ಕೆರೆಗಳು ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಗೆ ಬರುವುದಿಲ್ಲ.<br>ಲಿಂಗಾಂಬುದಿ ಕೆರೆಯು ಸಣ್ಣ ನೀರಾವರಿ ಇಲಾಖೆಯ ಕೆರೆಯಾಗಿದ್ದು, ಅರಣ್ಯ ಇಲಾಖೆ ಪ್ರದೇಶದಲ್ಲಿರುತ್ತದೆ. ಸದರಿ ಕೆರೆಯನ್ನು ಪ್ರವಾಸಿ ತಾಣವಾಗಿ ಅಭಿವೃದ್ಧಿ ಪಡಿಸುವ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |
| ಆ | 2021-2022ನೇ ಸಾಲಿನ ಆಯವ್ಯಯ ದಲ್ಲಿ ಈ ಕೆರೆಗಳ ಅಭಿವೃದ್ಧಿಗೆ ನಿಗಧಿಪಡಿಸಿರುವ ಅನುದಾನವೆಷ್ಟು ? | |

ಸಂಖ್ಯೆ: ಸನೀಇ 188 ವಿಸವಿ 2021.

(ಜೆ.ಸಿ.ಮಾಧುಸ್ವಾಮಿ,)
ಸಣ್ಣ ನೀರಾವರಿ ಸಚಿವರು.

<u>ಕರ್ನಾಟಕ ವಿಧಾನ ಸಭೆ</u>

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3418
2. ಸದಸ್ಯರ ಹೆಸರು : ಶ್ರೀ ಹೆಚ್.ಕೆ.ಕುಮಾರಸ್ವಾಮಿ
3. ಉತ್ತರಿಸಬೇಕಾದ ದಿನಾಂಕ : 23–03–2021

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಹಾಸನ ಜಿಲ್ಲೆ, ಹಾಸನ ತಾಲ್ಲೂಕು, ಯಗಚಿ ಎಡದಂಡೆ ನಾಲೆಯ ಮೊಸಳೆ ಬ್ರಾಂಚ್ ನಾಲಾ ನಿರ್ಮಾಣಕ್ಕಾಗಿ ಜಮೀನುಗಳನ್ನು ರೈತರಿಂದ ನೇರ ಖರೀದಿ ಮೂಲಕ ಭೂಸ್ವಾಧೀನಪಡಿಸಿಕೊಳ್ಳುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಹಾಸನ ಜಿಲ್ಲೆಯ ಯಗಚಿ ಜಲಾಶಯ ಯೋಜನೆಯ ಮೊಸಳೆ ಬ್ರಾಂಚ್ ಕೆನಾಲ್ ನಿರ್ಮಾಣ ಕಾಮಗಾರಿಗೆ 10 ಹಳ್ಳಿಗಳು ಒಳಪಡುತ್ತಿದ್ದು, ಈ ಗ್ರಾಮಗಳಲ್ಲಿ 103–18 ¾ ಎಕರೆ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳಬೇಕಾಗಿರುತ್ತದೆ. ಈ ಪೈಕಿ, 03 ಗ್ರಾಮಗಳ ಬಾಬ್ತು 16–25 ಎಕರೆ ಜಮೀನನ್ನು ನೇರ ಖರೀದಿ ಮೂಲಕ ಭೂಸ್ವಾಧೀನಪಡಿಸಿಕೊಳ್ಳಲು ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ, ಹಾಸನ ರವರು ದಿನಾಂಕ:16–09–2020 ರಂದು ದರ ನಿರ್ಧರಣಾ ಸಲಹಾ ಸಮಿತಿ ಸಭೆ ನಡೆಸಿ ದರ ನಿಗದಿಪಡಿಸಿದ್ದು, ಅದರನ್ವಯ ರೂ.7,18,30,592/– ಗಳ ಅವಶ್ಯಕತೆ ಇರುತ್ತದೆ.<br><br>ಉಳಿದ 7 ಗ್ರಾಮಗಳಲ್ಲಿ 345 ಭೂಮಾಲೀಕರ ಬಾಬ್ತು 86–33 ¾ ಎಕರೆ ವಿಸ್ತೀರ್ಣದ ಜಮೀನನ್ನು ಸ್ವಾಧೀನ ಪಡೆಯಲು ವಿಶೇಷ ಭೂಸ್ವಾಧೀನಾಧಿಕಾರಿಗಳು, ಹಾಸನ ಕಛೇರಿಯಲ್ಲಿ 11(1) ಅಧಿಸೂಚನೆ ತಯಾರಿಸಲು ಕ್ರಮ ವಹಿಸಲಾಗುತ್ತಿದೆ.<br><br>11(ಇ) ನಕ್ಷೆ ತಯಾರಾಗಿರುವ, ನೋಂದಣಿ ಕಾರ್ಯ ಕೈಗೊಂಡಿರುವ ಪ್ರಕರಣಗಳಿಗೆ ರೂ.2.18 ಕೋಟಿಗಳನ್ನು ಈಗಾಗಲೇ ಬಿಡುಗಡೆ ಮಾಡಲಾಗಿದೆ. ಉಳಿದ ಮೊತ್ತವನ್ನು ಅನುದಾನದ ಲಭ್ಯತೆಗನುಗುಣವಾಗಿ ಆಧ್ಯತೆಯ ಮೇಲೆ ಹಂತ ಹಂತವಾಗಿ ಬಿಡುಗಡೆ ಮಾಡಲು ಕ್ರಮ ವಹಿಸಲಾಗುವುದು. |
| ಆ | ಹಾಗಿದ್ದಲ್ಲಿ, ಇದಕ್ಕಾಗಿ ಯಾವಾಗ ಹಣ ಬಿಡುಗಡೆ ಮಾಡಲಾಗುವುದು? | |

***<u>ಸಂಖ್ಯೆ:ಜಸಂಇ 88 ಎಲ್‌ಎಕ್ಯೂ 2021</u>***

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3419 |
| 2 | ವಿಧಾನ ಸಭಾ ಸದಸ್ಯರ ಹೆಸರು | : | ಶ್ರೀ ಕುಮಾರಸ್ವಾಮಿ ಹೆಚ್.ಕೆ (ಸಕಲೇಶಪುರ) |
| 3 | ಉತ್ತರಿಸುವ ದಿನಾಂಕ | : | 23-03-2021 |
| 4 | ಉತ್ತರಿಸುವ ಸಚಿವರು | : | ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹಾಸನ ಜಿಲ್ಲೆಯ ಆಲೂರು ತಾಲ್ಲೂಕು, ಆಲೂರು ಪಟ್ಟಣಕ್ಕೆ ಅಗ್ನಿಶಾಮಕ ಠಾಣೆ ಮಂಜೂರಾಗಿದ್ದು, ತಾತ್ಕಾಲಿಕ ಶೆಡ್ ಕೂಡ ನಿರ್ಮಾಣ ಮಾಡಿರುವುದು ನಿಜವೇ; | ಹಾಸನ ಜಿಲ್ಲಾಧಿಕಾರಿಯವರು ಆಲೂರು ತಾಲ್ಲೂಕಿನಲ್ಲಿ ಅಗ್ನಿಶಾಮಕ ಠಾಣೆ ಸ್ಥಾಪನೆಗಾಗಿ ಸರ್ವೆ ನಂ.33 ರಲ್ಲಿ 01 ಎಕರೆ ಜಮೀನನ್ನು ದಿನಾಂಕ:09-02-2007 ರಂದು ಮಂಜೂರು ಮಾಡಿರುತ್ತಾರೆ.<br><br>ಸರ್ಕಾರದ ಆದೇಶದ ಸಂಖ್ಯೆ: ಒಇ 160 ಕಅಸೇ 2008, ದಿನಾಂಕ:30-08-2010 ರಲ್ಲಿ ಆಲೂರು ಅಗ್ನಿಶಾಮಕ ಠಾಣೆಯ ಸ್ಥಾಪನೆಗಾಗಿ ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶಿಸಲಾಗಿದ್ದು, ಸದರಿ ಅಗ್ನಿಶಾಮಕ ಠಾಣೆಗೆ ಸೂಕ್ತ ಕಟ್ಟಡವಿಲ್ಲದೆ ಕೋಟ್ಯಂತರ ರೂಪಾಯಿ ಬೆಲೆಬಾಳುವ ವಾಹನವನ್ನು ಸಂರಕ್ಷಿಸಲು ಹಾಗೂ ಸಿಬ್ಬಂದಿಗಳು ಕರ್ತವ್ಯ ನಿರ್ವಹಿಸಲು ಸಾಧ್ಯವಾಗದ ಕಾರಣ, ಕಟ್ಟಡ ಕಾಮಗಾರಿ ಪೂರ್ಣಗೊಂಡ ನಂತರ ಅಗತ್ಯ ಸಿಬ್ಬಂದಿ ಮಂಜೂರಾತಿ ಮತ್ತು ವಾಹನ ಉಪಕರಣಗಳಿಗೆ ಅನುದಾನವನ್ನು ಒದಗಿಸಲಾಗುವುದೆಂದು ಆರ್ಥಿಕ ಇಲಾಖೆಯು ತಿಳಿಸಿರುತ್ತದೆ.<br><br>ಪ್ರಸ್ತುತ, ಆಲೂರು ತಾಲ್ಲೂಕು ಪಂಚಾಯತಿಯ ಕಾರ್ಯನಿರ್ವಾಹಣಾಧಿಕಾರಿಯವರ ವಸತಿ ಗೃಹ ಕಟ್ಟಡದಲ್ಲಿ ತಾತ್ಕಾಲಿಕ ವ್ಯವಸ್ಥೆಯಡಿ ಅಗ್ನಿಶಾಮಕ ಠಾಣೆಯನ್ನು ಪ್ರಾರಂಭಿಸಲು ಯೋಜಿಸಿದ್ದು, 2021-2022 ನೇ ಆರ್ಥಿಕ ವರ್ಷದಲ್ಲಿ ಆದ್ಯತೆ ಮೇರೆಗೆ ಅನುದಾನದ ಲಭ್ಯತೆಯನುಸಾರ ಸಿಬ್ಬಂದಿ ಮತ್ತು ವಾಹನ/ಉಪಕರಣಗಳನ್ನು ಒದಗಿಸುವ ಬಗ್ಗೆ ಪರಿಶೀಲಿಸಲಾಗುವುದು. |
| ಆ) | ಹಾಗಿದ್ದಲ್ಲಿ, ಯಾವಾಗ ಕಾರ್ಯಾರಂಭ ಮಾಡಲಾಗುವುದು; | |
| ಇ) | ಅಗ್ನಿಶಾಮಕ ಠಾಣೆಗೆ ವಾಹನ ಮತ್ತು ಸಿಬ್ಬಂದಿಯನ್ನು ಯಾವಾಗ ಒದಗಿಸಲಾಗುವುದು? | |

ಸಂಖ್ಯೆ: ಒಇ 47 ಎಸ್‌ಎಫ್‌ಬಿ 2021

(ಬಸವರಾಜ ಬೊಮ್ಮಾಯಿ)
ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು
ಹಾಗೂ ಶಾಸನ ರಚನೆ ಸಚಿವರು

# ಕರ್ನಾಟಕ ವಿಧಾನ ಸಭೆ

1.ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3425
2. ಸದಸ್ಯರ ಹೆಸರು : ಶ್ರೀ ಅನಿಲ್ ಚಿಕ್ಕಮಾದು (ಹೆಚ್.ಡಿ.ಕೋಟೆ)
3. ಉತ್ತರಿಸುವ ದಿನಾಂಕ : 23-03-2021
4. ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕರ್ನಾಟಕ ಲೋಕಸೇವಾ ಆಯೋಗವು ನಡೆಸಿದ 2015ನೇ ಸಾಲಿನ ಗೆಜೆಟೆಡ್ ಪ್ರೊಬೆಷ್‌ನರಿ ಹುದ್ದೆಗಳು ನೇಮಕಾತಿ ಪ್ರಕ್ರಿಯೆಯಲ್ಲಿ ರಾಜ್ಯ ದತ್ತಾಂಶ ಕೇಂದ್ರ (Karnataka State data centre) (Centre for E governance ಅಂದರೆ ಇ-ಆಡಳಿತ ಕೇಂದ್ರ) ದ kpscresults.karnataka.gov.in ಎಂಬ ವೆಬ್ ಡೊಮೈನ್‌ನ ಮೂಲಕ ಅಭ್ಯರ್ಥಿಗಳ ವಿಷಯವಾರು ಅಂಕಗಳನ್ನು (subject wise scores) ಪ್ರಕಟಿಸಿರುವುದು ನಿಜವೇ; | ಕರ್ನಾಟಕ ಲೋಕಸೇವಾ ಆಯೋಗವು ನೀಡಿರುವ ಮಾಹಿತಿಯಂತೆ, National Informatics Centre (NIC) ವತಿಯಿಂದ ಅಪ್ಲಿಕೇಷನ್ ತಯಾರಿಸಿ ಆಯಾ ಅಭ್ಯರ್ಥಿಗಳಿಗೆ ತಮ್ಮ ವಿಷಯವಾರು ಅಂಕಗಳು ಲಭ್ಯವಾಗುವಂತೆ ಅವಕಾಶ ಕಲ್ಪಿಸಿ ರಾಜ್ಯ ದತ್ತಾಂಶ ಕೇಂದ್ರದ ಮುಖಾಂತರ Host ಮಾಡಲಾಗಿದೆ. |
| ಆ | ಹಾಗಿದ್ದಲ್ಲಿ ರಾಜ್ಯ ದತ್ತಾಂಶ ಕೇಂದ್ರ (Karnataka State data centre) (Centre for E governance ಅಂದರೆ ಇ-ಆಡಳಿತ ಕೇಂದ್ರ)ವು ಕರ್ನಾಟಕ ಲೋಕಸೇವಾ ಆಯೋಗ ಮತ್ತು (Tata xonsultancy Services TCS) ಕಂಪನಿ ಜೊತೆಗೆ ಮಾಡಿಕೊಂಡಿರುವ ತ್ರಿಪಕ್ಷೀಯ ಒಪ್ಪಂದದ ಸಹಿ ಮಾಡಿದ ಕರಾರು ಪತ್ರದ ಪ್ರತಿಯನ್ನು ನೀಡುವುದು? | ಮೇಲಂಡ 'ಅ'ರಲ್ಲಿ ಉತ್ತರಿಸಿರುವುದರಿಂದ ಈ ಪ್ರಮೇಯ ಉದ್ಭವಿಸುವುದಿಲ್ಲ. |

ಸಂಖ್ಯೆ: ಸಿಆಸುಇ 35 ಎಸ್‌ಎಸ್‌ಸಿ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3434 |
| 2 | ವಿಧಾನ ಸಭಾ ಸದಸ್ಯರ ಹೆಸರು | : | ಶ್ರೀ ರಘುಪತಿ ಭಟ್ ಕೆ.(ಉಡುಪಿ) |
| 3 | ಉತ್ತರಿಸುವ ದಿನಾಂಕ | : | 23-03-2021 |
| 4 | ಉತ್ತರಿಸುವ ಸಚಿವರು | : | ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಉಡುಪಿ ಜಿಲ್ಲೆಯ ಮಣಿಪಾಲದಲ್ಲಿ ಅಗ್ನಿಶಾಮಕ ಠಾಣೆ ತೆರೆಯುವ ಪ್ರಸ್ತಾವನೆ ಯಾವ ಹಂತದಲ್ಲಿದೆ; | ಉಡುಪಿ ಜಿಲ್ಲೆಯ ಮಣಿಪಾಲದಲ್ಲಿ ಅಗ್ನಿಶಾಮಕ ಠಾಣೆ ಸ್ಥಾಪಿಸುವ ಕುರಿತು ಉಡುಪಿ ಜಿಲ್ಲಾಧಿಕಾರಿಯವರು ಸರ್ವೆ ನಂ.412/ಎ1 ರಲ್ಲಿ 1 ಎಕರೆ ಜಮೀನು ಮಂಜೂರು ಮಾಡಿದ್ದು, ಮಣಿಪಾಲದಲ್ಲಿ ಬೆಂಕಿ ಆಕಸ್ಮಿಕಗಳು ಸಂಭವಿಸಿದ್ದಲ್ಲಿ ಸದರಿ ಪಟ್ಟಣದಿಂದ 09 ಕಿ.ಮೀ ಅಂತರದಲ್ಲಿ ಉಡುಪಿ ಅಗ್ನಿಶಾಮಕ ಠಾಣೆ, 12 ಕಿ.ಮೀ ವ್ಯಾಪ್ತಿಯಲ್ಲಿ ಮಲ್ಪೆ ಅಗ್ನಿಶಾಮಕ ಠಾಣೆಗಳು ಕಾರ್ಯ ನಿರ್ವಹಿಸುತ್ತಿದ್ದು, ಸಮರ್ಥವಾಗಿ ಅಗ್ನಿ ಅನಾಹುತಗಳನ್ನು ನಂದಿಸುವ ಕಾರ್ಯ ನಿರ್ವಹಿಸುತ್ತಿವೆ. |
| ಆ) | ಮಣಿಪಾಲ ಭಾಗದ ಇಂಡಸ್ಟ್ರಿಯಲ್ ಏರಿಯಾದಲ್ಲಿ ಹಲವಾರು ಕಂಪನಿಗಳು, ಪ್ರಮುಖ ಆಸ್ಪತ್ರೆ, ವಿದ್ಯಾಸಂಸ್ಥೆಗಳು, ವಸತಿ ಸಮುಚ್ಚಯಗಳು ಇರುವುದರಿಂದ ಇಲ್ಲಿಗೆ ಪ್ರತ್ಯೇಕ ಅಗ್ನಿಶಾಮಕ ಠಾಣೆಯ ಬೇಡಿಕೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಇ) | ಉಡುಪಿ ಜಿಲ್ಲೆಯ ಮಣಿಪಾಲದಲ್ಲಿ ಪ್ರತ್ಯೇಕ ಅಗ್ನಿಶಾಮಕ ಠಾಣೆ ಪ್ರಾರಂಭಿಸಲು ಸರ್ಕಾರದ ನಿಲುವೇನು ? | Standing Fire Advisory Council (SFAC) ಮಾನದಂಡಗಳ ಅನುಸಾರ 40 ಕಿ.ಮೀ ವ್ಯಾಪ್ತಿಯೊಳಗೆ ಒಂದು ಅಗ್ನಿಶಾಮಕ ಠಾಣೆ ಇರಬೇಕೆಂದಿದೆ. ಆದ್ದರಿಂದ, ಸದರಿ ಪಟ್ಟಣದಲ್ಲಿ ಜನಸಂಖ್ಯೆ, ಕೈಗಾರಿಕಾ ಬೆಳವಣಿಗೆ, ಕಟ್ಟಡಗಳ ಸಂಖ್ಯೆ ಹಾಗೂ ಅಗ್ನಿ ಅನಾಹುತಗಳು, ರಕ್ಷಣಾ ಕರೆಗಳ ಆಧಾರದ ಮೇರೆಗೆ ಮುಂದಿನ ದಿನಗಳಲ್ಲಿ ಪರಿಶೀಲಿಸಲಾಗುವುದು. |

**ಸಂಖ್ಯೆ: ಒಇ 48 ಎಸ್‌ಎಫ್‌ಬಿ 2021**

(ಬಸವರಾಜ ಬೊಮ್ಮಾಯಿ)
ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು
ಹಾಗೂ ಶಾಸನ ರಚನೆ ಸಚಿವರು

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ :** 3441

**ಉತ್ತರಿಸಬೇಕಾದ ದಿನಾಂಕ :** 23/03/2021

**ಸದಸ್ಯರ ಹೆಸರು :** ಶ್ರೀ ಶ್ರೀನಿವಾಸ್ ಎಂ. (ಮಂಡ್ಯ)

**ಉತ್ತರಿಸುವ ಸಚಿವರು :** ಯುವ ಸಬಲೀಕರಣ ಮತ್ತು ಕ್ರೀಡಾ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು.

***

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮಂಡ್ಯ ವಿಧಾನ ಸಭಾ ಕ್ಷೇತ್ರದಲ್ಲಿ ಗ್ರಾಮೀಣ ಕ್ರೀಡಾಂಗಣಗಳು ಯಾವ್ಯಾವ ಗ್ರಾಮಗಳಲ್ಲಿವೆ; ಇದ್ದಲ್ಲಿ ಇವುಗಳ ಸಂಪೂರ್ಣ ವಿವರ ನೀಡುವುದು; | ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ವತಿಯಿಂದ ಮಂಡ್ಯ ವಿಧಾನ ಸಭಾ ಕ್ಷೇತ್ರದ ಯಾವುದೇ ಗ್ರಾಮಗಳಲ್ಲಿ ಗ್ರಾಮೀಣ ಕ್ರೀಡಾಂಗಣಗಳು ಇರುವುದಿಲ್ಲ. |
| ಆ) | ಈ ಕ್ಷೇತ್ರದ ಕಸಬಾ ಹೋಬಳಿಯ ಬೂದನೂರು ಗ್ರಾಮ ಪಂಚಾಯಿತಿಯ ಕೇಂದ್ರ ಸ್ಥಾನ ಹಳೆಬೂದನೂರಿನಲ್ಲಿ ದಾನಿಗಳಾದ ದಿ.ರುದ್ರಪ್ಪರವರು ಕ್ರೀಡಾಂಗಣಕ್ಕಾಗಿ ಕೊಟ್ಟಿರುವ ಜಾಗವನ್ನು ಅಭಿವೃದ್ಧಿಪಡಿಸದೇ ಇರುವುದು ಮತ್ತು ಅದನ್ನು ಗ್ರಾಮೀಣ ಕ್ರೀಡೆ ಮತ್ತು ಶಾಲಾ ಕ್ರೀಡೆಗಳಿಗೆ ಒತ್ತು ನೀಡದೇ ಇರುವುದು ಹಾಗೂ ಕ್ರೀಡಾಂಗಣ ಮೂಲಭೂತ ಸೌಕರ್ಯಗಳಿಂದ ವಂಚಿತರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಮಂಡ್ಯ ವಿಧಾನ ಸಭಾ ಕ್ಷೇತ್ರದ ಕಸಬಾ ಹೋಬಳಿಯ ಬೂದನೂರು ಗ್ರಾಮ ಪಂಚಾಯಿತಿಯ ಕೇಂದ್ರ ಸ್ಥಾನ ಹಳೆಬೂದನೂರಿನ ಯಾವುದೇ ನಿವೇಶನವು ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಗೆ ಹಸ್ತಾಂತರಗೊಂಡಿರುವುದಿಲ್ಲ. |
| ಇ) | ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; | ಮೇಲಿನ ಉತ್ತರದಿಂದಾಗಿ ಈ ಪ್ರಶ್ನೆ ಉದ್ಭವಿಸುವುದಿಲ್ಲ. |
| ಈ) | ಮಂಡ್ಯ ವಿಧಾನ ಸಭಾ ಕ್ಷೇತ್ರದಲ್ಲಿನ ಈ ಗ್ರಾಮೀಣ ಕ್ರೀಡಾಂಗಣಗಳನ್ನು ಯಾವಾಗ ಅಭಿವೃದ್ಧಿ ಪಡಿಸಲಾಗುವುದು? | |

**ವೈಎಸ್‌ಡಿ-ಇಬಿಬಿ/79/2021.**

(ಡಾ|| ನಾರಾಯಣ ಗೌಡ)
ಯುವ ಸಬಲೀಕರಣ ಮತ್ತು ಕ್ರೀಡಾ ಹಾಗೂ
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3444

ಸದಸ್ಯರ ಹೆಸರು : ಶ್ರೀ.ಬಂಡೆಪ್ಪ ಖಾಶೆಂಪುರ್ (ಬೀದರ್ ದಕ್ಷಿಣ)

ಉತ್ತರಿಸುವ ದಿನಾಂಕ : 23-03-2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಾರಂಜಾ ಜಲಾಶಯದ ಹಿನ್ನೀರಿನಿಂದ ಎಷ್ಟು ರೈತರ ಜಮಿನು ಮುಳುಗಡೆಯಾಗಿದೆ ಹಾಗೂ ಮುಳುಗಡೆಯಾದ ರೈತರ ಜಮೀನುಗಳಿಗೆ ಸರ್ಕಾರ ಒದಗಿಸಿರುವ ಪರಿಹಾರದ ಮೊತ್ತವೆಷ್ಟು; | ಕಾರಂಜಾ ಜಲಾಶಯದ ಹಿನ್ನೀರಿನಲ್ಲಿ ಒಟ್ಟು 08 ಗ್ರಾಮಗಳು ಪೂರ್ತಿಯಾಗಿ ಹಾಗೂ 01 ಗ್ರಾಮ ಭಾಗಶ: ಮುಳುಗಡೆಯಾಗಿರುತ್ತದೆ. ಕಾರಂಜಾ ಜಲಾಶಯದ ಹಿನ್ನೀರಿನಲ್ಲಿ ರೈತರ ಭೂಮಿ ಒಟ್ಟು 16058 ಎ-05 ಗುಂ ಮುಳುಗಡೆಯಾಗಿದ್ದು. ವಿಶೇಷ ಭೂಸ್ವಾಧೀನಾಧಿಕಾರಿಗಳು ಕನೀನಿನಿ, ಕಾರಂಜಾ ಯೋಜನೆ, ಬೀದರ್ ರವರು ಮುಳುಗಡೆಯಾದ ರೈತರ 15522 ಎ-25 ಗುಂ ಜಮೀನಿಗೆ ಭೂ-ಪರಿಹಾರ ಮೊತ್ತ ರೂ.103.238 ಕೋಟಿಗಳನ್ನು ನೀಡಿರುತ್ತಾರೆ. ಉಳಿದ 535 ಎ-20 ಗುಂ ಜಮೀನುಗಾಗಿ ಭೂಸ್ವಾಧೀನ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. |
| ಆ) | ಸದರಿ ಜಲಾಶಯದ ಸಂತ್ರಸ್ಥರಿಗೆ ಇದುವರೆಗೂ ಸಂಪೂರ್ಣವಾಗಿ ಪರಿಹಾರವನ್ನು ಒದಗಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಇ) | ಬಂದಿದ್ದಲ್ಲಿ, ಬಾಕಿ ಇರುವ ಸಂತ್ರಸ್ಥರಿಗೆ ಪರಿಹಾರವನ್ನು ನೀಡಲು ಸರ್ಕಾರ ಕೈಗೊಂಡ ಕ್ರಮಗಳೇನು; | |
| ಈ) | ಈ ಜಲಾಶಯದ ಸಂತ್ರಸ್ಥರ ಕಲ್ಯಾಣಕ್ಕಾಗಿ ವಿಶೇಷ ಪ್ಯಾಕೇಜನ್ನು ನೀಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? | ಬಾಕಿ ಇರುವ ಭೂಸ್ವಾಧೀನ ಪ್ರಕ್ರಿಯೆ ಅಂತಿಮಗೊಳಿಸಿ, ನಿಯಮಾನುಸಾರ ಸೂಕ್ತ ಪರಿಹಾರ ಒದಗಿಸಲು ಕ್ರಮ ಕೈಗೊಳ್ಳಲು ಉದ್ದೇಶಿಸಲಾಗಿದೆ. |

ಸಂಖ್ಯೆ:ಜಸಂಇ 87 ಎಂಎಲ್‌ಎ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3447
2. ಸದಸ್ಯರ ಹೆಸರು : ಶ್ರೀ ಬಂಡೆಪ್ಪ ಖಾಶೆಂಪುರ್ (ಬೀದರ್ ದಕ್ಷಿಣ )
3. ಉತ್ತರಿಸುವ ಸಚಿವರು : ಮಾನ್ಯ ಗೃಹ, ಕಾನೂನು ಹಾಗೂ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವರು.
4. ಉತ್ತರಿಸುವ ದಿನಾಂಕ : 23.03.2021.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಾನೂನು ಇಲಾಖೆಯ ವತಿಯಿಂದ ಕಾನೂನು ಪದವೀಧರ ವಿದ್ಯಾರ್ಥಿಗಳ ಕಲ್ಯಾಣಕ್ಕಾಗಿ ಯಾವ ಯಾವ ಯೋಜನೆಗಳಿವೆ; | ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ ನವನಗರ, ಹುಬ್ಬಳ್ಳಿಯಲ್ಲಿ ಎಸ್.ಸಿ.ಎಸ್.ಪಿ. / ಟಿ.ಎಸ್.ಪಿ. ಉಪಯೋಜನೆಯನ್ನು 2017-18ನೇ ಸಾಲಿನಿಂದ ಪ್ರಾರಂಭಿಸಿದ್ದು, ಸದರಿ ಯೋಜನೆಯಡಿ ಕಾನೂನು ಪದವಿಯ ಅಂತಿಮ ವರ್ಷದಲ್ಲಿ ವ್ಯಾಸಂಗ ಮಾಡುತ್ತಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅರ್ಹ ವಿದ್ಯಾರ್ಥಿಗಳಿಗೆ ಸಮಾಜ ಕಲ್ಯಾಣ ಇಲಾಖೆಯು ಕ್ರಿಯಾಯೋಜನೆಯಲ್ಲಿ ಅನುಮೋದಿಸಿದಂತೆ, ಲ್ಯಾಪ್‌ಟಾಪ್ / ಕಾನೂನು ಪುಸ್ತಕ / ಇ-ನೋಟ್ ಪ್ಯಾಡ್ ಗಳನ್ನು ನೀಡಲಾಗುತ್ತಿದೆ. |
| ಆ)<br><br>ಇ) | ಸದರಿ ಯೋಜನೆಗಳಿಂದ ಕಳೆದ ಮೂರು ವರ್ಷಗಳಲ್ಲಿ ಎಷ್ಟು ವಿದ್ಯಾರ್ಥಿಗಳು ಸೌಲಭ್ಯವನ್ನು ಪಡೆದುಕೊಂಡಿರುತ್ತಾರೆ;<br><br>ಕಳೆದ ಮೂರು ವರ್ಷಗಳಲ್ಲಿ ಈ ಯೋಜನೆಗಳಿಗೆ ಒದಗಿಸಲಾಗಿರುವ ಅನುದಾನವೆಷ್ಟು ಹಾಗೂ ಎಷ್ಟು ಅನುದಾನವನ್ನು ಬಳಕೆ ಮಾಡಲಾಗಿದೆ? | ಎಸ್.ಸಿ.ಎಸ್.ಪಿ. / ಟಿ.ಎಸ್.ಪಿ. ಉಪಯೋಜನೆಯಡಿ ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ ನವನಗರ, ಹುಬ್ಬಳ್ಳಿ ವ್ಯಾಪ್ತಿಯಲ್ಲಿ ಬರುವ ಕಾನೂನು ಕಾಲೇಜುಗಳ ಅಂತಿಮ ವರ್ಷದ ಪದವಿ ವಿದ್ಯಾರ್ಥಿಗಳಿಗೆ ಕಳೆದ 3 ವರ್ಷಗಳಿಂದ ಒದಗಿಸಲಾದ ಅನುದಾನ ಹಾಗೂ ಸದರಿ ಸೌಲಭ್ಯವನ್ನು ಪಡೆದ ವಿದ್ಯಾರ್ಥಿಗಳ ವಿವರವನ್ನು ಈ ಕೆಳಗಿನಂತೆ ನೀಡಲಾಗಿದೆ; |

| | ವರ್ಷ | ಒದಗಿಸಲಾದ ಅನುದಾನ (ರೂ. ಲಕ್ಷಗಳಲ್ಲಿ) | ವಿದ್ಯಾರ್ಥಿಗಳ ಸಂಖ್ಯೆ | ಸೌಲಭ್ಯದ ವಿವರ | ಷರಾ |
|---|---|---|---|---|---|
| 1 | 2017-18 | 139.00 | 309 | ಲ್ಯಾಪ್ ಟಾಪ್ | ಹಂಚಿಕೆ ಮಾಡಲಾಗಿದೆ |
| 2 | 2018-19 | 106.00 | 200 | ಲ್ಯಾಪ್ ಟಾಪ್ | ಲ್ಯಾಪ್‌ಟಾಪ್ ಖರೀದಿ ಮಾಡಲಾಗಿದೆ. ವಿತರಿಸುವ ಕಾರ್ಯ ಪ್ರಗತಿಯಲ್ಲಿದೆ. |
| 3 | 2019-20 | 65.00 | 90 | ಲ್ಯಾಪ್ ಟಾಪ್ | ಲ್ಯಾಪ್‌ಟಾಪ್ ಖರೀದಿ ಮಾಡಲಾಗಿದೆ. ವಿತರಿಸುವ ಕಾರ್ಯ ಪ್ರಗತಿಯಲ್ಲಿದೆ. |
| 4 | 2020-21 | 33.00 | ಅಂತಿಮ ವರ್ಷದ ಕಾನೂನು ಪದವಿಯಲ್ಲಿ ಒಟ್ಟು 1507 ವಿದ್ಯಾರ್ಥಿಗಳಿರುತ್ತಾರೆ. | ಇ-ನೋಟ್ ಪ್ಯಾಡ್ | ಖರೀದಿ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ. |

ಸಂಖ್ಯೆ: ಲಾ-ಹೆಚ್‌ಆರ್‌ಎಮ್/40/2021

(ಬಸವರಾಜ ಬೊಮ್ಮಾಯಿ)
ಗೃಹ, ಕಾನೂನು ಹಾಗೂ ಸಂಸದೀಯ ವ್ಯವಹಾರಗಳು
ಮತ್ತು ಶಾಸನ ರಚನೆ ಸಚಿವರು

ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3450
2. ಸದಸ್ಯರ ಹೆಸರು : ಶ್ರೀ ಆನಂದ್ ಸಿದ್ದು ನ್ಯಾಮಗೌಡ
3. ಉತ್ತರಿಸುವ ದಿನಾಂಕ : 23/03/2021
4. ಉತ್ತರಿಸುವವರು : ಸಣ್ಣ ನೀರಾವರಿ ಸಚಿವರು
5.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಜಮಖಂಡಿ ಮತಕ್ಷೇತ್ರದ ಅಡಿಹುಡಿ– ತೊದಲಬಾಗಿ ಏತ ನೀರಾವರಿ ಯೋಜನೆಯನ್ನು ಪುನಶ್ಚೇತನಗೊಳಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಹೌದು. |
| ಆ | ಸದರಿ ಯೋಜನೆಯಡಿ ಅಳವಡಿಸಲಾಗಿದ್ದ ಸಿಮೆಂಟ್ ಪೈಪ್‌ಗಳು ಹಾಳಾಗಿದ್ದು ಹೊಸ ಪಿ.ಎಸ್.ಇ ಪೈಪುಗಳನ್ನು ಅಳವಡಿಸಲು ರೂ.10ಕೋಟಿ ಅಂದಾಜು ಪಟ್ಟಿ ಸಲ್ಲಿಸಿದ್ದು, ಇಲಾಖೆಯಿಂದ ಯಾವಾಗ ಟೆಂಡರ್ ಕರೆಯಲಾಗುವುದು; | ಸದರಿ ಯೋಜನೆಯನ್ನು ಪುನರುಜ್ಜೀವನಗೊಳಿಸಲು ಹಾಲಿ ಅಳವಡಿಸಲಾಗಿರುವ ಪಿ.ಎಸ್.ಸಿ. ಪೈಪ್‌ಗಳ ಬದಲಾಗಿ ಎಂ.ಎಸ್.ಪೈಪ್‌ಗಳನ್ನು ಅಳವಡಿಸಲು ಯೋಜಿಸಲಾಗಿದೆ. ಸದರಿ ಪುನರುಜ್ಜೀವನ ಕಾಮಗಾರಿಯನ್ನು ಅಂದಾಜು ಮೊತ್ತ ರೂ.1700.00 ಲಕ್ಷಗಳಿಗೆ ತಯಾರಿಸಲಾಗಿರುತ್ತದೆ.<br><br>ಪ್ರಸಕ್ತ ಆರ್ಥಿಕ ಪರಿಸ್ಥಿತಿಯಲ್ಲಿ ರಾಜ್ಯದ ಆರ್ಥಿಕ ಸಂಪನ್ಮೂಲಗಳನ್ನಾಧರಿಸಿ ಇಲಾಖೆಗೆ ಲಭ್ಯವಾಗುವ ಅನುದಾನದಲ್ಲಿ ಕಾಮಗಾರಿ ಕೈಗೊಳ್ಳಲು ಪರಿಶೀಲಿಸಲಾಗುವುದು. |
| ಇ | ಸದರಿ ಯೋಜನೆಯನ್ನು ಯಾವಾಗ ಪ್ರಾರಂಭಿಸಲಾಗುವುದು? | |

ಸಂಖ್ಯೆ:ಎಂಐಡಿ 190 ಎಲ್ಎಕ್ಯೂ 2021

(ಜೆ.ಸಿ.ಮಾಧುಸ್ವಾಮಿ)
ಸಣ್ಣ ನೀರಾವರಿ ಸಚಿವರು

## ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3454 |
| 2. | ಮಾನ್ಯ ಸದಸ್ಯರ ಹೆಸರು | : | ಶ್ರೀ ನಿಸರ್ಗ ನಾರಾಯಣಸ್ವಾಮಿ ಎಲ್.ಎನ್. (ದೇವನಹಳ್ಳಿ) |
| 3. | ಉತ್ತರಿಸುವ ದಿನಾಂಕ | : | 23-3-2021 |
| 4. | ಉತ್ತರಿಸುವ ಸಚಿವರು | : | ಗೃಹ, ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಬೆಂಗಳೂರು ಗ್ರಾಮಾಂತರ ಜಿಲ್ಲಾ ಪೊಲೀಸ್ ಅಧೀಕ್ಷಕರ ಕಛೇರಿ ಹಾಗೂ ಸಿಬ್ಬಂದಿಗೆ ವಸತಿ ಸಮುಚ್ಛಯ ಕಟ್ಟಡ ಕಟ್ಟಲು ಸರ್ಕಾರ ಕ್ರಮ ಕೈಗೊಂಡಿದೆಯೇ; (ವಿವರ ನೀಡುವುದು) | ಪ್ರಸ್ತುತ ಬೆಂಗಳೂರು ಜಿಲ್ಲಾ ಪೊಲೀಸ್ ಕಛೇರಿಯು ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ರವರ ಸುಪರ್ದಿಯಲ್ಲಿರುವ 'ಓ ಮಹಲ್' ಎಂಬ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಮಾಹೆಯಾನ ರೂ. 3740/- ಬಾಡಿಗೆ ಪಾವತಿಸಲಾಗುತ್ತಿದೆ.<br>ಪೊಲೀಸ್ ಗೃಹ 2025 ಯೋಜನೆಯಡಿ ಮುಂದಿನ 5 ವರ್ಷಗಳಲ್ಲಿ ಹೊಸದಾಗಿ 10034 ವಸತಿ ಗೃಹಗಳನ್ನು ನಿರ್ಮಾಣ ಮಾಡುವ ಪ್ರಸ್ತಾವನೆಗೆ ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದ್ದು, ಸದರಿ ಪ್ರಸ್ತಾವನೆಯನ್ನು ಸಹ ಈ ಯೋಜನೆಯ ಅಡಿಯಲ್ಲಿ ಪರಿಗಣಿಸಲಾಗುವುದು. |
| (ಆ) | ಹಾಗಿದ್ದಲ್ಲಿ, ಪೊಲೀಸ್ ಅಧೀಕ್ಷಕರ ಕಛೇರಿ ಹಾಗೂ ಸಿಬ್ಬಂದಿಗೆ ವಸತಿ ಸಮುಚ್ಛಯ ಕಟ್ಟಲು ಜಾಗ ಗುರುತಿಸಿ ಅಗತ್ಯ ಅನುದಾನ ಬಿಡುಗಡೆಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | |
| (ಇ) | ಯಾವ ಕಾಲಮಿತಿಯಲ್ಲಿ ಜಿಲ್ಲಾ ಪೊಲೀಸ್ ಅಧೀಕ್ಷಕರ ಕಛೇರಿ ಹಾಗೂ ವಸತಿ ಸಮುಚ್ಛಯ ನಿರ್ಮಾಣ ಮಾಡಲು ಕ್ರಮ ಕೈಗೊಳ್ಳಲಾಗುವುದು? (ವಿವರ ನೀಡುವುದು) | |

**ಸಂಖ್ಯೆ:ಹೆಚ್‌ಡಿ 31 ಪಿಬಿಎಲ್ 2021**

(ಬಸವರಾಜ ಬೊಮ್ಮಾಯಿ)
ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು
ಹಾಗೂ ಶಾಸನ ರಚನಾ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **3456**

ಉತ್ತರಿಸಬೇಕಾದ ದಿನಾಂಕ : 23/03/2021

ಸದಸ್ಯರ ಹೆಸರು : ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು)

ಉತ್ತರಿಸುವ ಸಚಿವರು : ಯುವ ಸಬಲೀಕರಣ ಮತ್ತು ಕ್ರೀಡಾ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು.

***

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಗ್ರಾಮೀಣ ಯುವಕರ ಅನುಕೂಲಕ್ಕಾಗಿ ವ್ಯಾಯಾಮ ಶಾಲೆ (ಜಿಮ್)ಗಳನ್ನು ತೆರೆಯುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ವತಿಯಿಂದ ಕೆಳಕಾಣಿಸಿದ ಯೋಜನೆಗಳಡಿಯಲ್ಲಿ ಯುವಜನರ ಅನುಕೂಲಕ್ಕಾಗಿ ವ್ಯಾಯಾಮ ಶಾಲೆಗಳಿಗೆ ಉಪಕರಣಗಳನ್ನು ನೀಡಲಾಗಿದೆ. :-<br>1) ಯುವನೀತಿ ಅನುಷ್ಠಾನ ಅಡಿಯಲ್ಲಿ ಯುವಶಕ್ತಿ ಕೇಂದ್ರ ಕಾರ್ಯಕ್ರಮದಡಿ ಯುವಜನರ ದೈಹಿಕ ಸಾಮರ್ಥ್ಯವನ್ನು ಬಲಪಡಿಸಲು ತಲಾ ರೂ.15.00 ಲಕ್ಷ ದಂತೆ ಈವರೆಗೆ ಒಟ್ಟು 98 ಕೇಂದ್ರಗಳಿಗೆ ಜಿಮ್ ಉಪಕರಣಗಳನ್ನು ಒದಗಿಸಲಾಗಿದೆ.<br>2) ಪರಿಶಿಷ್ಟ ಜಾತಿ /ಪಂಗಡ ಕಾರ್ಯಕ್ರಮದಡಿ ತಲಾ ರೂ. 10.00 ಲಕ್ಷ ದಂತೆ 2019-20ನೇ ಸಾಲಿನಲ್ಲಿ 15 ಕೇಂದ್ರಕ್ಕೆ ಜಿಮ್ ಉಪಕರಣಗಳನ್ನು ಒದಗಿಸಲಾಗಿದೆ. |
| ಆ. | ಕಿತ್ತೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ವ್ಯಾಯಾಮ ಶಾಲೆಗಳ (ಜಿಮ್) ನಿರ್ಮಾಣಕ್ಕೆ ಬೇಡಿಕೆಗಳಿರುವುದು ನಿಜವೇ ; | ಇಲ್ಲ |
| ಇ. | 2020-21ನೇ ಸಾಲಿನಲ್ಲಿ ಕಿತ್ತೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ಗ್ರಾಮೀಣ ಪ್ರದೇಶದ ಯುವಕರ ಅನುಕೂಲಕ್ಕೋಸ್ಕರ ವ್ಯಾಯಮ ಶಾಲೆಗಳ ಮಂಜೂರಾತಿಗೆ ಸರ್ಕಾರದ ಕ್ರಮವೇನು ? | ಅನ್ವಯಿಸುವುದಿಲ್ಲ |

**ವೈಎಸ್‌ಡಿ-ಇಬಿಬಿ/81/2021.**

(ಡಾ|| ನಾರಾಯಣ ಗೌಡ)
ಯುವ ಸಬಲೀಕರಣ ಮತ್ತು ಕ್ರೀಡಾ ಹಾಗೂ
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು.

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3458 |
| ಸದಸ್ಯರ ಹೆಸರು | : | ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು) |
| ಉತ್ತರಿಸಬೇಕಾದ ದಿನಾಂಕ | : | 23.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| | ಪ್ರಶ್ನೆ | ಉತ್ತರ |
|---|---|---|
| ಅ) | ಬೈಲಹೊಂಗಲ ವಿದ್ಯುತ್ ಉಪಕೇಂದ್ರದಲ್ಲಿ ಎರಡು 20 ಎಂ.ವಿ.ಎ. ಟ್ರಾನ್ಸ್ ಫಾರ್ಮರ್ ರೀ ಫಿಲ್ಲಿಂಗ್ ಘಟಕಗಳು ಈ ಹಿಂದೆ ಕಾರ್ಯನಿರ್ವಹಿಸುತ್ತಿದ್ದು ನಿಜವೇ; | ಬೈಲಹೊಂಗಲ 110 ಕೆವಿ ವಿದ್ಯುತ್ ಉಪ ಕೇಂದ್ರದಲ್ಲಿ 2x20 ಎಂ.ವಿ.ಎ ಟ್ರಾನ್ಸ್‌ಫಾರ್ಮರ್‌ಗಳು ಕಾರ್ಯನಿರ್ವಹಿಸುತ್ತಿದ್ದು ಕಡಿಮೆ ಒತ್ತಡವನ್ನು ಹೊಂದಿರುವ ಕಾರಣ ಒಂದು ಪರಿವರ್ತಕವನ್ನು ಮಾತ್ರ ತುರ್ತು ಪರಿಸ್ಥಿತಿಯನ್ನು ನಿಭಾಯಿಸಲು ಬೇರೆ ಉಪ ಕೇಂದ್ರಕ್ಕೆ ಸ್ಥಳಾಂತರಿಸಲಾಗಿರುತ್ತದೆ. |
| ಆ) | ಪ್ರಸ್ತುತ ಇವುಗಳನ್ನು ಬೇರೆ ಕಡೆ ವರ್ಗಾಯಿಸಲಾಗಿದೆಯೇ; | |
| ಇ) | ಇದರಿಂದ ಬೈಲಹೊಂಗಲ ಮತ್ತು ಕಿತ್ತೂರು ತಾಲ್ಲೂಕಿನ ರೈತರ ಟಿ.ಸಿ. (ವಿದ್ಯುತ್ ಪರಿವರ್ತಕಗಳು) ಸುಟ್ಟಾಗ ಸಕಾಲಕ್ಕೆ ರೈತರಿಗೆ ಟಿ.ಸಿ. ರಿಪೇರಿ ಮಾಡಿಕೊಡಲಾಗದೇ ತೊಂದರೆಯಾಗುತ್ತಿರುವುದು ನಿಜವೇ; | ಪ್ರಸ್ತುತ ಬೈಲಹೊಂಗಲ ಮತ್ತು ಕಿತ್ತೂರು ತಾಲೂಕಿನಲ್ಲಿ ಎರಡು ಪರಿವರ್ತಕ (DTC) ದುರಸ್ತಿ ಕೇಂದ್ರಗಳು ಕಾರ್ಯನಿರ್ವಹಿಸುತ್ತಿದ್ದು, ರೈತರ ಕೃಷಿ ಪಂಪ್ ಸೆಟ್‌ಗಳಿಗೆ ತೊಂದರೆಯಾಗದಂತೆ ವಿಫಲವಾದ ಪರಿವರ್ತಕಗಳನ್ನು ದುರಸ್ತಿ ಮಾಡಿಕೊಡಲಾಗುತ್ತಿದೆ. ಈ ದುರಸ್ತಿ ಕೇಂದ್ರಗಳಲ್ಲದೇ ಬೆಳಗಾವಿಯಲ್ಲಿನ ಎನ್.ಜಿ.ಇ.ಎಫ್., ಹುಬ್ಬಳ್ಳಿಯಲ್ಲಿರುವ ಎನ್.ಜಿ.ಇ.ಎಫ್., ಹಾಗೂ ಪಿ.ಎಂ.ಪಿ. ಪರಿವರ್ತಕ ದುರಸ್ತಿ ಕೇಂದ್ರಗಳಿಂದಲೂ ಸಹ ವಿಫಲವಾದ ಪರಿವರ್ತಕಗಳನ್ನು ದುರಸ್ತಿಗೊಳಿಸಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ನಿಯಮಾನುಸಾರ 72 ಗಂಟೆಗಳಲ್ಲಿ ಪರಿವರ್ತಕಗಳನ್ನು ಬದಲಿಸಲು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ವತಿಯಿಂದ ಕ್ರಮ ಕೈಗೊಳ್ಳಲಾಗುತ್ತಿದೆ. |
| ಈ) | ಹಾಗಿದ್ದಲ್ಲಿ, ಈ ಎರಡು 20 ಎಂ.ವಿ.ಎ. ಟ್ರಾನ್ಸ್ ಫಾರ್ಮರ್ ರೀ ಫಿಲ್ಲಿಂಗ್ ಘಟಕಗಳನ್ನು ಮರಳಿ ಬೈಲಹೊಂಗಲ ವಿದ್ಯುತ್ ಉಪಕೇಂದ್ರಕ್ಕೆ ಸ್ಥಳಾಂತರಿಸಲು ಸರ್ಕಾರದ ಕ್ರಮವೇನು? | ಬೈಲಹೊಂಗಲದ 110 ಕೆವಿ ವಿದ್ಯುತ್ ಉಪಕೇಂದ್ರದಲ್ಲಿ ಹಾಲಿ ಇದ್ದ 2x20 ಎಂ.ವಿ.ಎ ವಿದ್ಯುತ್ ಪರಿವರ್ತಕಗಳಲ್ಲಿ ಒಂದು ಪರಿವರ್ತಕವನ್ನು ಮಾತ್ರ ಸ್ಥಳಾಂತರಿಸಿದ್ದು, ಸ್ಥಳಾಂತರಿಸಿದ ಪರಿವರ್ತಕದ ಸ್ಥಳದಲ್ಲಿ 1X20 ಎಂ.ವಿ.ಎ ಬದಲಿ ವಿದ್ಯುತ್ ಪರಿವರ್ತಕವನ್ನು ಅಳವಡಿಸಿ ದಿನಾಂಕ:19.03.2021 ರಂದು ಚಾಲನೆಗೊಳಿಸಲಾಗಿರುತ್ತದೆ |

ಸಂಖ್ಯೆ: ಎನರ್ಜಿ 122 ಪಿಪಿಎಂ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3459 |
| ಸದಸ್ಯರ ಹೆಸರು | : | ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು) |
| ಉತ್ತರಿಸಬೇಕಾದ ದಿನಾಂಕ | : | 23.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| | ಪ್ರಶ್ನೆ | ಉತ್ತರ |
|---|---|---|
| ಅ) | ಕಿತ್ತೂರು ತಾಲ್ಲೂಕಿನ ವ್ಯಾಪ್ತಿಯಲ್ಲಿ ಕಿತ್ತೂರು ಹೆಸ್ಕಾಂ ಉಪವಿಭಾಗದಲ್ಲಿ ಸಿಬ್ಬಂದಿ ಕೊರತೆ ಮತ್ತು ಕಿತ್ತೂರು ಹೆಸ್ಕಾಂ ಉಪವಿಭಾಗವನ್ನು ಗ್ರಾಮೀಣ ಮತ್ತು ನಗರ ಎಂದು ವಿಂಗಡಿಸುವ ಬೇಡಿಕೆ ಸರ್ಕಾರದ ಮುಂದಿರುವುದು ನಿಜವೇ; | ಕಿತ್ತೂರು ತಾಲ್ಲೂಕು ಒಳಗೊಂಡಂತೆ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯಲ್ಲಿ ನಿರ್ವಹಣಾ ಸಿಬ್ಬಂದಿ ಕೊರತೆಯಿರುವುದರಿಂದ, ಈ ಕೊರತೆಯನ್ನು ನೀಗಿಸುವ ನಿಟ್ಟಿನಲ್ಲಿ 465 ಸಂಖ್ಯೆಯ ಕಿರಿಯ ಪವರ್ ಮ್ಯಾನ್ ಹುದ್ದೆಗಳ ನೇಮಕಾತಿ ಪ್ರಕ್ರಿಯೆಯು ಪ್ರಸ್ತುತ ಜಾರಿಯಲ್ಲಿರುತ್ತದೆ ಹಾಗೂ ಪದೋನ್ನತಿ ಕೋಟಾದಡಿಯಲ್ಲಿ ಖಾಲಿಯಿರುವ ಹುದ್ದೆಗಳನ್ನು ಕಾಲ ಕಾಲಕ್ಕೆ ಪದೋನ್ನತಿ ನೀಡಿ, ಸದರಿ ತಾಲ್ಲೂಕಿಗೆ ಹುದ್ದೆಗಳನ್ನು ಭರ್ತಿ ಮಾಡಿ ಅಗತ್ಯತೆಗೆ ಅನುಗುಣವಾಗಿ ತೈನಾತಿಸಲಾಗುವುದು. |
| ಆ) | ಹಾಗಿದ್ದಲ್ಲಿ, ಈ ಕುರಿತು ಸರ್ಕಾರ ಯಾವ ಕ್ರಮಕೈಗೊಂಡಿದೆ? | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯಲ್ಲಿ ಬರುವ ಕಿತ್ತೂರು ಉಪ ವಿಭಾಗ ಕಛೇರಿಯನ್ನು ಕಿತ್ತೂರು ಗ್ರಾಮೀಣ ಮತ್ತು ಕಿತ್ತೂರು ನಗರ ಉಪ ವಿಭಾಗ ಎಂದು ವಿಂಗಡಿಸುವ ಪ್ರಸ್ತಾವನೆಯು ಸ್ವೀಕೃತವಾಗಿರುವುದಿಲ್ಲ.<br><br>ಆದರೆ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯ ಕಿತ್ತೂರು ಪಟ್ಟಣದಲ್ಲಿರುವ ಶಾಖಾ ಕಛೇರಿಯನ್ನು ಕಿತ್ತೂರು ಪಟ್ಟಣ ಮತ್ತು ಗ್ರಾಮೀಣ ಶಾಖಾ ಕಛೇರಿಗಳನ್ನಾಗಿ ವಿಂಗಡಿಸುವ ಪ್ರಸ್ತಾವನೆಯು ಸ್ವೀಕೃತವಾಗಿರುತ್ತದೆ. ಸದರಿ ಪ್ರಸ್ತಾವನೆಯನ್ನು ಹೆಸ್ಕಾಂ ಕಂಪನಿಯ ನಿರ್ದೇಶಕರ ಮಂಡಳಿಯ ಸಭೆಯಲ್ಲಿ ಮಂಡಿಸಲಾಗಿರುತ್ತದೆ.<br><br>ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಯಾವುದೇ ನೂತನ ಶಾಖಾ ಕಛೇರಿ ಸೃಜಿಸಲು ಭೌಗೋಳಿಕ ಪ್ರದೇಶ, ವಿಸ್ತೀರ್ಣ, ಸ್ಥಾವರಗಳ ಸಂಖ್ಯೆ, ಜನ ಸಂಖ್ಯೆ, ಅಧಿಕಾರಿ / ಸಿಬ್ಬಂದಿ ವರ್ಗದ ಅಗತ್ಯತೆ ಮತ್ತು ಆರ್ಥಿಕ ಹೊರೆ ಮಾಹಿತಿಯನ್ನು ಮಾನದಂಡವಾಗಿರಿಸಿಕೊಂಡು ಪರಿಶೀಲಿಸಿ, ಕಾರ್ಯಸಾಧ್ಯತೆ (Feasibility) ಕಂಡುಬಂದಲ್ಲಿ ಪ್ರಸ್ತಾವನೆಯನ್ನು ಮರು ಮಂಡಿಸುವಂತೆ ಕಂಪನಿಯ ನಿರ್ದೇಶಕರ ಮಂಡಳಿಯು ಸೂಚಿಸಿರುತ್ತದೆ.<br><br>ಪ್ರಸ್ತುತ ಸದರಿ ಶಾಖೆಯು ಹೊಂದಿರುವ ಅಂಕಿ-ಅಂಶಗಳ ಆಧಾರದನ್ವಯ ವಿಂಗಡಿಸಲು ಕಾರ್ಯಸಾಧ್ಯತೆ ಕಂಡು ಬಂದಿರುವುದಿಲ್ಲ. |

ಸಂಖ್ಯೆ: ಎನರ್ಜಿ 123 ಪಿಪಿಎಂ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

'ל `

# ಕರ್ನಾಟಕ ವಿಧಾನ ಸಭೆ

1.ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3460

2. ಸದಸ್ಯರ ಹೆಸರು : ಶ್ರೀ ರಾಘವೇಂದ್ರ ಬಸವರಾಜ ಹಿಟ್ನಾಳ್ ಕೆ. (ಕೊಪ್ಪಳ)

3. ಉತ್ತರಿಸುವ ದಿನಾಂಕ : 23-03-2021

4. ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | K.P.S.C ರವರು ರಾಜ್ಯ ದತ್ತಾಂಶ ಕೇಂದ್ರದಿಂದ (K.S.D.C Centre for E-Governance) ದಿನಾಂಕ:23.12.2019 ರಿಂದ ದಿನಾಂಕ:31.03.2020ರವರೆಗೆ (Data Base) ಗಳನ್ನು ಪಡೆದಿರುವುದು ನಿಜವೇ; | ಕರ್ನಾಟಕ ಲೋಕಸೇವಾ ಆಯೋಗವು ನೀಡಿರುವ ಮಾಹಿತಿಯಂತೆ, NIC (National Informatics Centre) ವತಿಯಿಂದ ಅಪ್ಲಿಕೇಷನ್ ತಯಾರಿಸಿ ಆಯಾ ಅಭ್ಯರ್ಥಿಗಳಿಗೆ ತಮ್ಮ ವಿಷಯವಾರು ಅಂಕಗಳು ಲಭ್ಯವಾಗುವಂತೆ ಅವಕಾಶ ಕಲ್ಪಿಸಿ ರಾಜ್ಯ ದತ್ತಾಂಶ ಕೇಂದ್ರದ ಮುಖಾಂತರ ಹೋಸ್ಟ್ ಮಾಡಲಾಗಿದ್ದು ದಿ:27-02-2020ರಂದು http:/www.kpscresults.karnataka.gov.in/gp2015 ಈ ಲಿಂಕ್‌ನಲ್ಲಿ ಅಂಕಗಳನ್ನು ಡೌನ್ ಲೋಡ್ ಮಾಡಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ. |
| ಆ | ಹಾಗಿದ್ದಲ್ಲಿ, ಈ ಡೇಟಾ ಬೇಸ್‌ಗಳ(Data Base) ಹೆಸರು ಸರ್ವರ್ ಹೆಸರು ಮತ್ತು ಪಡೆದ ದಿನಾಂಕಗಳ ವಿವರಗಳನ್ನು ನೀಡುವುದು? | ಯಾವುದೇ ತಂತ್ರಾಂಶವನ್ನು ಬಳಸಲು Operating System ಹಾಗೂ Database ನ ಅವಶ್ಯಕತೆ ಇರುತ್ತದೆ. ಮೇಲ್ಕಂಡ ತಂತ್ರಾಂಶಕ್ಕೆ Windows Operating System ಹಾಗೂ SQL Databaseಅನ್ನು ಬಳಸಲಾಗಿರುತ್ತದೆ. |

ಸಂಖ್ಯೆ: ಸಿಆಸುಇ 40 ಎಸ್‌ಎಸ್‌ಸಿ 2021

( ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ.

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3462 |
| ಸದಸ್ಯರ ಹೆಸರು | : | ಶ್ರೀ ಮಸಾಲ ಜಯರಾಮ್ (ತುರುವೇಕೆರೆ) |
| ಉತ್ತರಿಸಬೇಕಾದ ದಿನಾಂಕ | : | 23.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| | ಪ್ರಶ್ನೆ | ಉತ್ತರ |
|---|---|---|
| ಅ) | ತುರುವೇಕೆರೆ ತಾಲ್ಲೂಕು ಬೆಸ್ಕಾಂ ವತಿಯಿಂದ ಹೆಚ್.ವಿ.ಡಿ.ಎಸ್.ಯೋಜನೆಯ ಕಾಮಗಾರಿಯನ್ನು ಕೈಗೊಳ್ಳಲು ಪ್ರಸ್ತಾವನೆ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ತುರುವೇಕೆರೆ ತಾಲ್ಲೂಕಿನಲ್ಲಿ ಹೆಚ್.ವಿ.ಡಿ.ಎಸ್ ಯೋಜನೆಯನ್ನು ಅನುಷ್ಠಾನಗೊಳಿಸುವಂತೆ ಕೋರಿ ಮಾನ್ಯ ಶಾಸಕರು, ತುರುವೇಕೆರೆ ವಿಧಾನಸಭಾ ಕ್ಷೇತ್ರ ರವರು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.<br><br>ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗ ರವರ ಪತ್ರ ಸಂ: KERC/D/5/2017-18/1539 ದಿನಾಂಕ 06.12.2017 ರ ಪ್ರಕಾರ ಮುಂದಿನ ಆದೇಶದವರೆಗೆ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯಿಂದ ಯಾವುದೇ ಹೊಸ ಹೆಚ್.ವಿ.ಡಿ.ಎಸ್ ಯೋಜನೆಗಳ ಅನುಮೋದನೆಗಾಗಿ ಮಾನ್ಯ ಕೆ.ಇ.ಆರ್.ಸಿ ರವರಿಗೆ ಪ್ರಸ್ತಾವನೆಯನ್ನು ಸಲ್ಲಿಸಲು ಅವಕಾಶವಿರುವುದಿಲ್ಲ. ಆದ್ದರಿಂದ, ಸದರಿ ತಾಲ್ಲೂಕಿನಲ್ಲಿ HVDS ಯೋಜನೆಯನ್ನು ಕೈಗೆತ್ತಿಕೊಂಡಿರುವುದಿಲ್ಲ. |
| ಆ) | ಹಾಗಿದ್ದಲ್ಲಿ, ಪ್ರಸ್ತುತ ಯಾವ ಹಂತದಲ್ಲಿದೆ ಮತ್ತು ಯಾವಾಗ ಕಾಮಗಾರಿ ಕೈಗೊಳ್ಳಲಾಗುವುದು ಮತ್ತು ವಿಳಂಬಕ್ಕೆ ಕಾರಣವೇನು? (ಸಂಪೂರ್ಣ ಮಾಹಿತಿ ನೀಡುವುದು) | |

**ಸಂಖ್ಯೆ: ಎನರ್ಜಿ 124 ಪಿಪಿಎಂ 2021**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3463
2. ಸದಸ್ಯರ ಹೆಸರು : ಶ್ರೀ ಮಸಾಲ ಜಯರಾಮ್
3. ಉತ್ತರಿಸಬೇಕಾದ ದಿನಾಂಕ : 23-03-2021

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ತುಮಕೂರು ಜಿಲ್ಲೆಯ ಹೇಮಾವತಿ ನಾಲಾ ವಲಯ ವತಿಯಿಂದ ನಾಗಮಂಗಲ ಶಾಖಾ ನಾಲೆ ಮತ್ತು ಇದರ ವಿತರಣಾ ನಾಲೆಯನ್ನು ಆಧುನೀಕರಣಗೊಳಿಸುವ ಕಾಮಗಾರಿಯು ಪ್ರಸ್ತುತ ಯಾವ ಹಂತದಲ್ಲಿದೆ; ಯಾವಾಗ ಅನುಷ್ಠಾನಗೊಳಿಸಲಾಗುವುದು; | ತುಮಕೂರು ವಲಯದ ಹೇಮಾವತಿ ನಾಲಾ ವ್ಯಾಪ್ತಿಯಡಿಯಲ್ಲಿ ಬರುವ ನಾಗಮಂಗಲ ಶಾಖಾ ಮುಖ್ಯ ನಾಲೆಯನ್ನು ಆಧುನೀಕರಣಗೊಳಿಸುವ ಕಾಮಗಾರಿಯ ಅಂದಾಜು ಪಟ್ಟಿಯನ್ನು ರೂ.475.00 ಕೋಟಿಗಳಿಗೆ ಕಾವೇರಿ ನೀರಾವರಿ ನಿಗಮದ ವತಿಯಿಂದ ತಯಾರಿಸಿದ್ದು, ನಿಗಮದ ಪರಿಶೀಲನೆಯಲ್ಲಿದೆ.<br><br>ನಾಗಮಂಗಲ ಶಾಖಾ ನಾಲೆಯ ಅಡಿಯಲ್ಲಿ ಬರುವ ವಿತರಣಾ ನಾಲಾ ಅಭಿವೃದ್ಧಿ ಕಾಮಗಾರಿಗಳಿಗೆ ಡಿ.ಪಿ.ಆರ್. ತಯಾರಿಸುವ ಪ್ರಕ್ರಿಯೆ ನಿಗಮದ ಹಂತದಲ್ಲಿ ಜಾರಿಯಲ್ಲಿದೆ. |
| ಆ | ಹಾಗಿದ್ದಲ್ಲಿ, ನಾಗಮಂಗಲ ಶಾಖಾ ನಾಲೆಯನ್ನು ಸುಮಾರು ಎಷ್ಟು ಕಿ.ಮೀ ವ್ಯಾಪ್ತಿಯಲ್ಲಿ ಆಧುನೀಕರಣಗೊಳಿಸಲಾಗುವುದು; ಈ ಭಾಗದಲ್ಲಿ ಸುಮಾರು ಎಷ್ಟು ಅಚ್ಚುಕಟ್ಟು ಪ್ರದೇಶ ಹೊಂದಿರುತ್ತದೆ; ಒಟ್ಟಾರೆ ಇದರ ಉದ್ದ ಎಷ್ಟು ಹೊಂದಿರುತ್ತದೆ; (ಸಂಪೂರ್ಣ ಮಾಹಿತಿ ನೀಡುವುದು) | ನಾಗಮಂಗಲ ಶಾಖಾ ನಾಲೆಯ ಮುಖ್ಯ ನಾಲೆಯ ಒಟ್ಟು ಉದ್ದವಾದ 78.460 ಕಿ.ಮೀ ಅನ್ನು ಆಧುನೀಕರಣಗೊಳಿಸಲು ಉದ್ದೇಶಿಸಲಾಗಿದ್ದು, 49,047.94 ಹೆಕ್ಟೇರ್ ಅಚ್ಚುಕಟ್ಟು ಪ್ರದೇಶ ಹೊಂದಿದೆ. |
| ಇ | ಪ್ರಸ್ತುತ ಕಾಮಗಾರಿಗೆ ತಗುಲುವ ಅಂದಾಜು ವೆಚ್ಚ ಎಷ್ಟು; ಇದರಲ್ಲಿ ತುರುವೇಕೆರೆ ಮತ ಕ್ಷೇತ್ರದ ವ್ಯಾಪ್ತಿಯಲ್ಲಿ ಎಷ್ಟು ಕಿ.ಮೀ ನಾಲೆಯು ಹಾದು ಹೋಗಿರುತ್ತದೆ? (ಸಂಪೂರ್ಣ ಮಾಹಿತಿ ನೀಡುವುದು) | ಮುಖ್ಯ ನಾಲೆಯ ಆಧುನೀಕರಣ ಕಾಮಗಾರಿಯ ಅಂದಾಜು ಮೊತ್ತ ರೂ.475.00 ಕೋಟಿಯಾಗಿದ್ದು ಇದರಲ್ಲಿ ತುರುವೇಕೆರೆ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಒಟ್ಟು 25.01 ಕಿ.ಮೀ ಉದ್ದ ಬರುತ್ತದೆ (ಸರಪಳಿ:22.89 ಕಿ.ಮೀ ನಿಂದ 47.90 ಕಿ.ಮೀ ವರೆಗೆ). |

*ಸಂಖ್ಯೆ:ಜಸಂಇ 75 ಎನ್‌ಎಲ್‌ಎ 2021*

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3468
2. ಸದಸ್ಯರ ಹೆಸರು : ಶ್ರೀ ಹೆಚ್.ಡಿ.ರೇವಣ್ಣ
3. ಉತ್ತರಿಸಬೇಕಾದ ದಿನಾಂಕ : 23-03-2021

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಹೇಮಾವತಿ / ಯಗಚಿ / ವಾಟೆಹೊಳೆ / ಎತ್ತಿನಹೊಳೆ ನೀರಾವರಿ ಜಲಾಶಯ ಯೋಜನೆಗಳಿಗೆ ಭೂಸ್ವಾಧೀನಗೊಂಡಿರುವ ಜಮೀನುಗಳ ಮಾಲೀಕರಿಗೆ ಹಲವು ದಶಕ ಕಳೆದರೂ ಸಹ ಇದುವರೆವಿಗೂ ಭೂಪರಿಹಾರ ನೀಡದೇ ರೈತರು ಪರಿಹಾರಕ್ಕಾಗಿ ದಾವೆ ಹೂಡಿ ಭೂಸ್ವಾಧೀನ ಅಧಿಕಾರಿ ವಿರುದ್ಧ ಡಿಕ್ರಿ ಪಡೆದು ಸರ್ಕಾರಿ ಕಛೇರಿಗಳ ಜಪ್ತಿ ಆದೇಶ ಹೊರಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದರಿಂದಾಗಿ ಸರ್ಕಾರಕ್ಕೆ ಸಾವಿರಾರು ಕೋಟಿಗಳ ರೂಪಾಯಿಗಳ ಹೆಚ್ಚಿನ ಹೊರೆ ಉಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೇಮಾವತಿ / ಯಗಚಿ / ವಾಟೆಹೊಳೆ ನೀರಾವರಿ ಜಲಾಶಯ ಯೋಜನೆಗಳಿಗೆ ಭೂಸ್ವಾಧೀನಗೊಂಡಿರುವ ಜಮೀನುಗಳ ಕಂದಾಯ ದಾಖಲೆಗಳನ್ನು ಹಾಜರುಪಡಿಸುತ್ತಿರುವ ಭೂಮಾಲೀಕರುಗಳಿಗೆ ಲಭ್ಯವಿರುವ ಅನುದಾನದಲ್ಲಿ ಆದ್ಯತಾನುಸಾರ ಭೂಪರಿಹಾರವನ್ನು ಪಾವತಿಸಲಾಗುತ್ತಿದೆ. ಸಿವಿಲ್ ನ್ಯಾಯಾಲಯಗಳಲ್ಲಿ ಹೆಚ್ಚಿನ ಪರಿಹಾರ ಕೋರಿ, ದಾವೆ ಹೂಡಿ ಆದೇಶವಾಗಿರುವ ಪ್ರಕರಣಗಳಲ್ಲಿ ಜಪ್ತಿ ಆದೇಶ ಜಾರಿಯಾಗಿರುವ ಪ್ರಕರಣಗಳಲ್ಲಿ ಆದ್ಯತಾನುಸಾರ ಪರಿಹಾರವನ್ನು ಪಾವತಿಸಲಾಗುತ್ತಿದೆ.<br><br>ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯಡಿ ರೈತರು ಭೂಪರಿಹಾರ ಕೋರಿ ದಾವೆ ಹೂಡಿ ಭೂಸ್ವಾಧೀನ ಅಧಿಕಾರಿ ವಿರುದ್ಧ ಡಿಕ್ರಿ ಪಡೆದು ಸರ್ಕಾರಿ ಕಛೇರಿಗಳ ಜಪ್ತಿ ಆದೇಶ ಆಗಿರುವ ಪ್ರಕರಣ ಇರುವುದಿಲ್ಲ. |
| ಆ | ಅಲ್ಲದೇ, ನೀರಾವರಿ ಇಲಾಖೆಯಿಂದ ಅಗತ್ಯವಿರುವ ಭೂಪರಿಹಾರ ಒದಗಿಸುವಂತೆ ಸಂಬಂಧಿಸಿದ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಮೇಲಿಂದ ಮೇಲೆ ಒತ್ತಾಯ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕಾವೇರಿ ನೀರಾವರಿ ನಿಗಮದ ಭೂಸ್ವಾಧೀನ ಪ್ರಕರಣಗಳಿಗೆ ಅನುದಾನ ಬಿಡುಗಡೆಗೆ ಪ್ರತ್ಯೇಕ ಲೆಕ್ಕ ಶೀರ್ಷಿಕೆ ಇರುವುದಿಲ್ಲ. ಬಂಡವಾಳ ಲೆಕ್ಕಶೀರ್ಷಿಕೆಯಡಿ ಬಿಡುಗಡೆಯಾಗುವ ಅನುದಾನದಲ್ಲಿ ಆದ್ಯತಾನುಸಾರ ಭೂಸ್ವಾಧೀನ ಪ್ರಕರಣಗಳಿಗೆ ಅನುದಾನವನ್ನು ನೀಡಲಾಗುತ್ತಿದೆ. |
| ಇ | ಹಾಗಿದ್ದಲ್ಲಿ, ಈ ನೀರಾವರಿ ಜಲಾಶಯ ಯೋಜನೆಗಳಿಗೆ ಭೂಸ್ವಾಧೀನಗೊಂಡಿರುವ ಜಮೀನುಗಳ ಮಾಲೀಕರಿಗೆ ಪಾವತಿಸಲು ಬಾಕಿ ಇರುವ ಪರಿಹಾರವನ್ನು ಕೂಡಲೇ ಬಿಡುಗಡೆ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು?(ಮಾಹಿತಿ ನೀಡುವುದು) | 2020-21ನೇ ಸಾಲಿಗೆ ಕಾವೇರಿ ನೀರಾವರಿ ನಿಗಮಕ್ಕೆ ಬಿಡುಗಡೆ ಮಾಡಲಾದ ಅನುದಾನದ ಪೈಕಿ ಮಾರ್ಚ್ 2021 ರ ಮಾಹೆಯಲ್ಲಿ ವಿಶೇಷ ಭೂಸ್ವಾಧೀನಾಧಿಕಾರಿಗಳು, ಹಾಸನ ರವರಿಗೆ ನ್ಯಾಯಾಲಯ ಪ್ರಕರಣಗಳನ್ನು ಲೋಕ್ ಅದಾಲತ್‌ನಲ್ಲಿ ಇತ್ಯರ್ಥಪಡಿಸಿಕೊಳ್ಳಲು ರೂ.8,96,00,000/- ಸಾಮಾನ್ಯ ಅವಾರ್ಡ್ ಪ್ರಕರಣಗಳು, ನೇರ ಖರೀದಿ ಪ್ರಕರಣಗಳು ಹಾಗೂ 28(ಎ) ಪ್ರಕರಣಗಳಿಗೆ ರೂ.21,45,43,000/- ಬಿಡುಗಡೆ ಮಾಡಲಾಗಿರುತ್ತದೆ.<br><br>ಎತ್ತಿನಹೊಳೆ ಯೋಜನೆಗೆ ಸಂಬಂಧಿಸಿದಂತೆ, ಜಿಲ್ಲಾಧಿಕಾರಿಗಳು ಭೂಪರಿಹಾರ ಬಿಡುಗಡೆ ಮಾಡುವಂತೆ ಕೋರಿ ಪ್ರಸ್ತಾವನೆ ಸಲ್ಲಿಸಿದ್ದು, ರೂ.462.00 ಕೋಟಿಗಳ ಮೊತ್ತವನ್ನು ಅವಾರ್ಡ್ ಪಾವತಿಗಾಗಿ ಬಿಡುಗಡೆ ಮಾಡಲಾಗಿರುತ್ತದೆ. |

*ಸಂಖ್ಯೆ:ಜಸಂಇ 87 ಎನ್‌ಎಲ್‌ಎ 2021*

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3476
2) ಸದಸ್ಯರ ಹೆಸರು : ಶ್ರೀ ಮಹದೇವ ಕೆ. (ಪಿರಿಯಾಪಟ್ಟಣ)
3) ಉತ್ತರಿಸುವ ದಿನಾಂಕ: : 23-03-2021
4) ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

<table>
<tr><th>ಕ್ರ ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ರಾಜ್ಯದಲ್ಲಿ ಪೆಟ್ರೋಲ್ ಹಾಗೂ ಡೀಸೆಲ್ ಬೆಲೆ ಏರಿಕೆಯಾಗಲು ಕಾರಣವೇನು;</td><td>ಪೆಟ್ರೋಲ್ ಮತ್ತು ಡೀಸೆಲ್‌ಗಳ ಬೆಲೆಯು ಮಾರುಕಟ್ಟೆ ಆಧಾರಿತವಾಗಿದೆ. ಇವುಗಳ ಮೂಲ ಬೆಲೆಯಲ್ಲಿ ದಿನೇ ದಿನೇ ಬದಲಾವಣೆಯಾಗುತ್ತಿರುವ ಕಾರಣ, ಅವುಗಳ ಮಾರಾಟ ಬೆಲೆಯು ಏರಿಕೆಯಾಗುತ್ತಿದೆ.</td></tr>
<tr><td>ಆ)</td><td>ಪೆಟ್ರೋಲ್ ಹಾಗೂ ಡೀಸೆಲ್ ಬೆಲೆ ಏರಿಕೆಯಿಂದ ಅಗತ್ಯ ವಸ್ತುಗಳ ಬೆಲೆ ಏರಲು ಕಾರಣವಾಗುವುದಿಲ್ಲವೇ;</td><td>ಪೆಟ್ರೋಲ್ ಮತ್ತು ಡೀಸೆಲ್ ಬೆಲೆ ಏರಿಕೆಯು ಅಗತ್ಯ ವಸ್ತುಗಳ ಬೆಲೆ ಏರಿಕೆಗೆ ಕಾರಣವಾಗುವುದೆಂದು ನೇರವಾಗಿ ಸಂಬಂಧ ಕಲ್ಪಿಸುವುದು ಕಷ್ಟ. ಸರಕುಗಳ ಬೆಲೆಗಳು ಅನೇಕ ಕಾರಣಗಳಿಂದ ಪ್ರಭಾವಿತವಾಗಿರುತ್ತವೆ.</td></tr>
<tr><td>ಇ)</td><td>ಪೆಟ್ರೋಲ್ ಹಾಗೂ ಡೀಸೆಲ್ ಮೂಲ ಬೆಲೆ ಎಷ್ಟು ಹಾಗೂ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಪ್ರತಿ ಲೀಟರ್ ಮೇಲೆ ವಿಧಿಸಿರುವ ತೆರಿಗೆಗಳು ಯಾವುವು ಹಾಗೂ ದರ ಎಷ್ಟು; (ವಿವರ ನೀಡುವುದು)</td><td>ಕರ್ನಾಟಕ ರಾಜ್ಯದಲ್ಲಿ ದಿನಾಂಕ:08/03/2021ರಲ್ಲಿರುವಂತೆ ಪೆಟ್ರೋಲ್ ಹಾಗೂ ಡೀಸೆಲ್‌ಗಳ ಮೂಲ ಬೆಲೆ, ಕೇಂದ್ರ ತೆರಿಗೆ, ರಾಜ್ಯ ತೆರಿಗೆ ಇತ್ಯಾದಿಗಳು ಸೇರಿ ಪ್ರತಿ ಲೀಟರ್‌ನ ಬೆಲೆಯ ವಿವರ ಈ ಕೆಳಕಂಡಂತೆ ಇರುತ್ತದೆ.
<table>
<tr><th>ವಸ್ತು</th><th>ಮೂಲ ಬೆಲೆ</th><th>ಕೇಂದ್ರ ಅಬಕಾರಿ ಸುಂಕ</th><th>ಸರಬರಾಜು ವೆಚ್ಚ</th><th>ಒಟ್ಟು</th><th>ತೆರಿಗೆ ಮೊತ್ತ</th><th>ವ್ಯಾಪಾರಿಗಳ ಕಮಿಷನ್</th><th>ರೀಟೇಲ್ ಬೆಲೆ ಪ್ರತಿ ಲೀಟರ್‌ಗೆ (ರೂ.ಗಳಲ್ಲಿ)</th></tr>
<tr><td>ಪೆಟ್ರೋಲ್</td><td>33.93</td><td>32.90</td><td>0.42</td><td>68.25</td><td>23.54 (35%)</td><td>3.42</td><td>94.21</td></tr>
<tr><td>ಡೀಸೆಲ್</td><td>35.64</td><td>31.80</td><td>0.41</td><td>67.85</td><td>16.28 (24%)</td><td>2.22</td><td>86.35</td></tr>
</table></td></tr>
<tr><td>ಈ)</td><td>ಪೆಟ್ರೋಲ್ ಹಾಗೂ ಡೀಸೆಲ್‌ಗಳನ್ನು ಜಿ.ಎಸ್.ಟಿ ವ್ಯಾಪ್ತಿಗೆ ಒಳಪಡಿಸಿದ್ದರೆ ಡೀಸೆಲ್ ಹಾಗೂ ಪೆಟ್ರೋಲ್ ಬೆಲೆಗಳು ಕಡಿಮೆಯಾಗುತ್ತವೆ ಎಂಬುದು ಆರ್ಥಿಕ ತಜ್ಞರ ಅಭಿಪ್ರಾಯವಾಗಿದ್ದು ಇದರ ಬಗ್ಗೆ ಸರ್ಕಾರದ ನಿಲುವೇನು?</td><td>ತೆರಿಗೆಗಳನ್ನು ಮತ್ತಷ್ಟು ಉತ್ತಮಗೊಳಿಸುವ ಬಗ್ಗೆ (rationalizing of taxes) ಯೋಚಿಸಬಹುದು. ಆದರೆ, ಪೆಟ್ರೋಲ್ ಮತ್ತು ಡೀಸೆಲ್‌ಗಳನ್ನು ಜಿ.ಎಸ್.ಟಿ. ವ್ಯಾಪ್ತಿಗೆ ತಂದರೆ ಅದು ರಾಜ್ಯದ ಸಂಪನ್ಮೂಲವನ್ನು ಸುಗಮವಾಗಿ ಕ್ರೋಢೀಕರಿಸುವಲ್ಲಿ ಹಿನ್ನಡೆಯಾಗುವುದು.</td></tr>
</table>

ಸಂಖ್ಯೆ: ಆಇ 42 ಸಿಎಸ್‌ಎಲ್ 2021

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3477
2. ಸದಸ್ಯರ ಹೆಸರು : ಶ್ರೀ. ಮಹದೇವ ಕೆ. (ಪಿರಿಯಾಪಟ್ಟಣ)
3. ಉತ್ತರಿಸಬೇಕಾದ ದಿನಾಂಕ : 23.03.2021.
4. ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಯವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕಳೆದ ಮೂರು ವರ್ಷಗಳ ಅಂಕಿ ಅಂಶಗಳ ಪ್ರಕಾರ ಸರ್ಕಾರದ ಒಟ್ಟು ಆದಾಯದಲ್ಲಿ ಸರ್ಕಾರಿ ನೌಕರರ ಸಂಬಳ ಹಾಗೂ ಭತ್ಯೆಗಳಿಗೆ ಆಗುವ ವೆಚ್ಚ ಎಷ್ಟು; | ಕಳೆದ ಮೂರು ವರ್ಷಗಳಲ್ಲಿ ಸರ್ಕಾರಿ ನೌಕರರ ಸಂಬಳ ಹಾಗೂ ಭತ್ಯೆಗಳಿಗೆ ಆಗಿರುವ ವೆಚ್ಚದ ವಿವರಗಳು ಈ ಕೆಳಕಂಡಂತಿರುತ್ತವೆ. (ಕೆಳಗಿನ ಪಟ್ಟಿ ನೋಡಿ) |
| ಆ | ಪ್ರತಿ ತಿಂಗಳು ಸರ್ಕಾರಿ ನೌಕರರಿಗೆ ಸಂಬಳ ಮತ್ತು ಭತ್ಯೆಗಳನ್ನು ಪಾವತಿಸಲು ಎಷ್ಟು ಖರ್ಚು ಬರುತ್ತದೆ; | ಒಟ್ಟು ವೇತನದಲ್ಲಿ ರಾಜ್ಯವಲಯ ಮತ್ತು ಜಿಲ್ಲಾ ವಲಯದ ನೌಕರರ ಸಂಬಳ ಮತ್ತು ಭತ್ಯೆಗಳು ಸೇರಿರುತ್ತದೆ. |

(ರೂ. ಕೋಟಿಗಳಲ್ಲಿ)

| ವರ್ಷ | ವಾರ್ಷಿಕ ಸಂಬಳ ಮತ್ತು ಭತ್ಯೆಗಳ ವೆಚ್ಚದ ವಿವರ | ಸರಾಸರಿ ಪ್ರತಿ ತಿಂಗಳು ಪಾವತಿಸುವ ಸಂಬಳ & ಭತ್ಯೆಗಳ ವೆಚ್ಚದ ವಿವರ |
|---|---|---|
| 2017-18 | 22856.72 | 1904.73 |
| 2018-19 | 29532.72 | 2461.06 |
| 2019-20 | 31524.76 | 2627.06 |

ಸಂಖ್ಯೆ: ಆಇ 23 ಬಿಜಿಎಲ್ 2021

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

1 ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3483
2 ಸದಸ್ಯರ ಹೆಸರು : ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ)
3 ಉತ್ತರಿಸುವ ದಿನಾಂಕ : 23.03.2021
4 ಉತ್ತರಿಸುವ ಸಚಿವರು : ಮಾನ್ಯ ಯೋಜನಾ ಸಚಿವರು, ಯೋಜನೆ,ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

*****

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | 2018-19ನೇ ಸಾಲಿನಿಂದ ಸ್ಥಳೀಯ ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯ ಅನದಾನದಲ್ಲಿ ಕೊನೆಯ ಕಂತಿನ ಅನುದಾನವನ್ನು ಇದುವರೆಗೂ ಬಿಡುಗಡೆ ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಆ) | ಸದರಿ ಕಂತಿನ ಅನುದಾನ ಬಿಡುಗಡೆ ಮಾಡದೇ ತಡೆಹಿಡಿದಿರಲು ಕಾರಣವೇನು; | ಆರ್ಥಿಕ ಇಲಾಖೆಯ ನಿರ್ದೇಶನದಂತೆ ಬಿಡುಗಡೆಯಾದ ಅನುದಾನ ಮತ್ತು ಆರಂಭಿಕ ಶಿಲ್ಕು ಸೇರಿ ಒಟ್ಟು ಅನುದಾನದಲ್ಲಿ ಶೇ.75ರಷ್ಟು ವೆಚ್ಚವಾದಲ್ಲಿ ಮಾತ್ರ ಮುಂದಿನ ಕಂತಿನ ಅನುದಾನ ಬಿಡುಗಡೆ ಮಾಡಲಾಗುತ್ತಿದೆ. 2018-19ನೇ ಸಾಲಿನ ಫೆಬ್ರುವರಿ ಅಂತ್ಯಕ್ಕೆ ಜಿಲ್ಲಾಧಿಕಾರಿಗಳ ಪಿ.ಡಿ ಖಾತೆಯಲ್ಲಿ ರೂ.948.97 ಕೋಟಿಗಳಷ್ಟು ಅನುದಾನ ಬಾಕಿ ಇದ್ದ ಕಾರಣ ನಾಲ್ಕನೇ ಕಂತಿನ ಅನುದಾನ ಬಿಡುಗಡೆ ಮಾಡಲಾಗಿರುವುದಿಲ್ಲ. |
| (ಇ) | ಜಿಲ್ಲಾಧಿಕಾರಿಗಳಿಗೆ ಈ ಕುರಿತು ನೀಡಲಾದ ಸ್ಪಷ್ಟ ನಿರ್ದೇಶನದ ಪ್ರತಿಗಳನ್ನು ಒದಗಿಸುವುದು; | ಸರ್ಕಾರವು ಶಾಸಕರ ಪ್ರದೇಶಾಭಿವೃದ್ಧಿ ಅನುದಾನವನ್ನು ನಿಗದಿತ ಕಾಲಾವಧಿಯಲ್ಲಿ ವೆಚ್ಚ ಮಾಡಲು ದಿನಾಂಕ:23.06.2020 ರಂದು ಮಾನ್ಯ ಮುಖ್ಯ ಕಾರ್ಯದರ್ಶಿಯವರಿಂದ ಎಲ್ಲಾ ಜಿಲ್ಲಾಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ ಹಾಗೂ ದಿನಾಂಕ:23.02.2021 ರಂದು ನಾನೇ ಖುದ್ದು ವಿಡಿಯೋ ಸಂವಾದದ ಮೂಲಕ ಜಿಲ್ಲಾಧಿಕಾರಿಗಳಿಗೆ ಸೂಕ್ತ ನಿರ್ದೇಶನ ನೀಡಿರುತ್ತೇನೆ. |
| (ಈ) | ಬಾಕಿ ಉಳಿದ ಕಂತಿನ ಅನುದಾನವನ್ನು ಯಾವಾಗ ನಿರೀಕ್ಷಿಸಬಹುದು? | ಬಾಕಿ ಉಳಿದ ಕಂತಿನ ಅನುದಾನವನ್ನು ಬಿಡುಗಡೆ ಮಾಡುವ ಸಂಬಂಧ ಆರ್ಥಿಕ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಲಾಗಿತ್ತು. ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಆಇ 29 ವೆಚ್ಚ 06/2021(ಇ), ದಿನಾಂಕ: 10.03.2021ರಲ್ಲಿ ಕಡಿತಗೊಳಿಸಲಾದ ಅನುದಾನವನ್ನು ಹೆಚ್ಚುವರಿಯಾಗಿ ಒದಗಿಸಲು ಸಾಧ್ಯವಿಲ್ಲವೆಂದು ಹಿಂಬರಹ ನೀಡಿದೆ. |

**ಸಂಖ್ಯೆ: ಪಿಡಿಎಸ್ 33 ಕೆಎಲ್ಎಸ್ 2021**

**(ಡಾ|| ನಾರಾಯಣಗೌಡ)**
ಸಚಿವರು,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

# ಕರ್ನಾಟಕ ವಿಧಾನ ಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3491

2) ಮಾನ್ಯ ಸದಸ್ಯರ ಹೆಸರು : ಶ್ರೀ ಶಿವಣ್ಣ.ಬಿ (ಆನೇಕಲ್)

3) ಉತ್ತರಿಸುವ ದಿನಾಂಕ : 23/03/2021

4) ಉತ್ತರಿಸುವ ಸಚಿವರು : ಮಾನ್ಯ ಗೃಹ, ಕಾನೂನು ಮತ್ತು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ಆನೇಕಲ್ ತಾಲ್ಲೂಕು ಕೇಂದ್ರದಲ್ಲಿ ಸಂಚಾರ ಪೊಲೀಸ್ ಠಾಣೆ ಪ್ರಾರಂಭದ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; (ವಿವರ ನೀಡುವುದು) | ಹೌದು<br>ಪ್ರಸ್ತಾವನೆಯನ್ನು ಮುಂದಿನ ಆರ್ಥಿಕ ವರ್ಷದಲ್ಲಿ ಪರಿಶೀಲಿಸಲಾಗುವುದು. |
| (ಆ) | ಈ ತಾಲ್ಲೂಕು ಕೇಂದ್ರದಲ್ಲಿ ಸಂಚಾರ ಪೊಲೀಸ್ ಠಾಣೆ ಪ್ರಾರಂಭದ ಅವಶ್ಯಕತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? (ವಿವರ ನೀಡುವುದು) | |

**ಸಂಖ್ಯೆ: ಹೆಚ್‌ಡಿ 51 ಪಿಓಪಿ 2021**

(ಬಸವರಾಜ ಬೊಮ್ಮಾಯಿ)
ಗೃಹ, ಕಾನೂನು ಮತ್ತು ಸಂಸದೀಯ
ವ್ಯವಹಾರಗಳು ಮತ್ತು ಶಾಸನ ರಚನೆ
ಸಚಿವರು.

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3493 |
| ಮಾನ್ಯ ಸದಸ್ಯರ ಹೆಸರು | ಶ್ರೀ ಖಾದರ್ ಯು. ಟಿ (ಮಂಗಳೂರು) |
| ಉತ್ತರಿಸಬೇಕಾದ ದಿನಾಂಕ | 23-03-2021 |
| ಉತ್ತರಿಸಬೇಕಾದವರು | ಅಬಕಾರಿ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಟ್ಟು ಎಷ್ಟು ಎಂ.ಎಸ್.ಐ.ಎಲ್ ಮದ್ಯದಂಗಡಿಗಳನ್ನು ತೆರೆಯಲಾಗಿದೆ; | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಟ್ಟು 24 ಸಿಎಲ್-11ಸಿ ಎಂ.ಎಸ್.ಐ.ಎಲ್ ಮದ್ಯದಂಗಡಿಗಳನ್ನು ತೆರೆಯಲಾಗಿದೆ. |
| ಆ) | ಇನ್ನು ಹೊಸದಾಗಿ ಇಂತಹ ಅಂಗಡಿಗಳನ್ನು ಈ ಜಿಲ್ಲೆಯಲ್ಲಿ ತೆರೆಯುವ ಉದ್ದೇಶ ಇದೆಯೇ? (ವಿವರ ನೀಡುವುದು) | ರಾಜ್ಯದಲ್ಲಿ 2009ರಲ್ಲಿ ಮಂಜೂರು ಮಾಡಲಾದ 463 ಸಿಎಲ್-11ಸಿ ಸನ್ನದುಗಳ ಹಾಗೂ 2016ರಲ್ಲಿ ಮಂಜೂರು ಮಾಡಲಾದ 900 ಸಿಎಲ್-11ಸಿ ಸನ್ನದುಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಗೆ ಒಟ್ಟು 46 ಸನ್ನದುಗಳ ಕೋಟಾ ಹಂಚಿಕೆ ಮಾಡಲಾಗಿದೆ. ಅದರನ್ವಯ 24 ಎಂ.ಎಸ್.ಐ.ಎಲ್ ಮಳಿಗೆಗಳನ್ನು ತೆರೆಯಲಾಗಿದ್ದು, ಇನ್ನೂ 22 ಮಳಿಗೆಗಳನ್ನು ತೆರೆಯಲು ಬಾಕಿ ಇರುತ್ತದೆ. |

ಆಇ 49 ಇಎಲ್‌ಕ್ಯೂ 2021

(ಕೆ. ಗೋಪಾಲಯ್ಯ)
ಅಬಕಾರಿ ಸಚಿವರು

# ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3494 |
| 2 | ವಿಧಾನ ಸಭಾ ಸದಸ್ಯರ ಹೆಸರು | : | ಶ್ರೀ ಖಾದರ್ ಯು.ಟಿ (ಮಂಗಳೂರು) |
| 3 | ಉತ್ತರಿಸುವ ದಿನಾಂಕ | : | 23-03-2021 |
| 4 | ಉತ್ತರಿಸುವ ಸಚಿವರು | : | ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹೊಸದಾಗಿ ರಚನೆಯಾಗಿರುವ ಉಳ್ಳಾಲ ತಾಲ್ಲೂಕಿಗೆ ಹೊಸದಾಗಿ ಅಗ್ನಿಶಾಮಕ ಠಾಣೆ ಮಂಜೂರು ಮಾಡುವ ಉದ್ದೇಶ ಸರ್ಕಾರಕ್ಕಿದೆಯೇ; | ಉಲ್ಲಾಳ ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ ಫಜಿಲ್/ಕೈರಂ ಮತ್ತು ಬೈಕಂಪಾಡಿ ಠಾಣೆಗಳು, ಅಗ್ನಿಶಾಮಕ ಠಾಣೆಗಳ ಸ್ಥಾಪನೆಗೆ ಇರುವ ಮಾನದಂಡಗಳನ್ನು ಪೂರೈಸುವುದಿಲ್ಲ. ಅಲ್ಲದೇ, ಸಮೀಪದಲ್ಲಿ ಸುಸಜ್ಜಿತ ಅಗ್ನಿಶಾಮಕ ಠಾಣೆಗಳು ಲಭ್ಯವಿದೆ. ಆದ್ದರಿಂದ, ಫಜಿಲ್/ಕೈರಂ ಮತ್ತು ಬೈಕಂಪಾಡಿ ಅಗ್ನಿಶಾಮಕ ಠಾಣೆಗಳ ಸ್ಥಾಪನೆ ಪ್ರಸ್ತಾವನೆಯನ್ನು ತಿರಸ್ಕರಿಸಲಾಗಿದೆ<br><br>ಆದಾಗ್ಯೂ, ಸದರಿ ಪ್ರದೇಶಗಳಲ್ಲಿ ಜನಸಂಖ್ಯೆ, ಕೈಗಾರಿಕಾ ಬೆಳವಣಿಗೆ, ಕಟ್ಟಡಗಳ ಸಂಖ್ಯೆ ಹಾಗೂ ಅಗ್ನಿ ಅನಾಹುತಗಳು, ರಕ್ಷಣಾ ಕರೆಗಳ ಆಧಾರದ ಮೇರೆಗೆ ಮುಂದಿನ ದಿನಗಳಲ್ಲಿ ಪರಿಶೀಲಿಸಲಾಗುವುದು. |
| ಆ) | ಹಾಗಿದ್ದಲ್ಲಿ, ಈ ಕುರಿತು ವಿವರಗಳೇನು ? | |

**ಸಂಖ್ಯೆ: ಒಇ 49 ಎಸ್‌ಎಫ್‌ಬಿ 2021**

(ಬಸವರಾಜ ಬೊಮ್ಮಾಯಿ)
ಗೃಹ ಮತ್ತು ಕಾನೂನು, ಸಂಸದೀಯ ವ್ಯವಹಾರಗಳು
ಹಾಗೂ ಶಾಸನ ರಚನೆ ಸಚಿವರು

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3495
2. ಸದಸ್ಯರ ಹೆಸರು : ಶ್ರೀ ಖಾದರ್ ಯು.ಟಿ.
3. ಉತ್ತರಿಸಬೇಕಾದ ದಿನಾಂಕ : 23.03.2021
4. ಉತ್ತರಿಸುವ ಸಚಿವರು : ಸಣ್ಣ ನೀರಾವರಿ ಸಚಿವರು.

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಮಂಗಳೂರು ವಿಧಾನಸಭಾ ಕ್ಷೇತ್ರಕ್ಕೆ 2019-20ನೇ ಸಾಲಿನಲ್ಲಿ ಸಣ್ಣ ನೀರಾವರಿ ಇಲಾಖೆಗೆ ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪಯೋಜನೆ ಲೆಕ್ಕಶೀರ್ಷಿಕೆಯಲ್ಲಿ ಮಂಜೂರಾದ 3 ಕಾಮಗಾರಿಗಳು (ಒಟ್ಟು ರೂ.140.00 ಲಕ್ಷಗಳು) ಇದುವರೆಗೂ ಅನುಷ್ಠಾನ ಗೊಳ್ಳದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ | ಬಂದಿದ್ದಲ್ಲಿ, ಈ ಕಾಮಗಾರಿಗಳು ಅನುಷ್ಠಾನಗೊಳ್ಳದಿರಲು ಕಾರಣವೇನು? | ಮಂಗಳೂರು ವಿಧಾನಸಭಾ ಕ್ಷೇತ್ರಕ್ಕೆ 2019-20ನೇ ಸಾಲಿನಲ್ಲಿ ಸಣ್ಣ ನೀರಾವರಿ ಇಲಾಖೆಗೆ ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪಯೋಜನೆ ಲೆಕ್ಕಶೀರ್ಷಿಕೆಯಲ್ಲಿ ಮಂಜೂರಾದ 3 ಕಾಮಗಾರಿಗಳಿಗೆ ಟೆಂಡರ್ ಪ್ರಕ್ರಿಯೆ ಪೂರ್ಣಗೊಂಡಿರುತ್ತದೆ.<br><br>ಅದರಂತೆ ಸದರಿ ಕಾಮಗಾರಿಗಳ ಟೆಂಡರ್ ಗಳಿಗೆ ಆರ್ಥಿಕ ಇಲಾಖೆಯ ಸಹಮತಿ ಪಡೆಯುವ ಬಗ್ಗೆ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಕಳುಹಿಸಿದ್ದು, ಆರ್ಥಿಕ ಇಲಾಖೆಯ ಅಭಿಪ್ರಾಯ ಈ ಕೆಳಕಂಡಂತಿರುತ್ತದೆ.<br><br>"SCSP/TSP ಅಡಿ ಒದಗಿಸಿದ ಅನುದಾನಕ್ಕೆ ಎದುರಾಗಿ 1:1 ಕಾಮಗಾರಿಗಳನ್ನು ತೆಗೆದುಕೊಳ್ಳುವ ಬದಲಾಗಿ 1:4 ಅನುಪಾತದಲ್ಲಿ ಕಾಮಗಾರಿಗಳನ್ನು ತೆಗೆದುಕೊಳ್ಳಲಾಗಿದೆ. ಇದರಿಂದ ಹೆಚ್ಚುವರಿ ಹಣಕಾಸಿನ ಬದ್ಧತೆ ಉಂಟಾಗಿರುತ್ತದೆ. ಆದ್ದರಿಂದ ಈಗಾಗಲೇ ಚಾಲ್ತಿಯಲ್ಲಿರುವ ಕಾಮಗಾರಿಗಳು ಭೌತಿಕವಾಗಿ ಮತ್ತು ಆರ್ಥಿಕವಾಗಿ ತೃಪ್ತಿಕರವಾಗಿ ಮುಕ್ತಾಯವಾದ ನಂತರ ಪ್ರಸ್ತಾಪಿತ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಪರಿಗಣಿಸುವಂತೆ ಮತ್ತು ಆ ರೀತಿ ಈಗಾಗಲೇ ತೆಗೆದುಕೊಂಡ ಕಾಮಗಾರಿಗಳು ಮುಕ್ತಾಯವಾಗುವವರೆಗೆ ಇಂತಹ ಪ್ರಕರಣಗಳನ್ನು ಆರ್ಥಿಕ ಇಲಾಖೆಗೆ ಸಲ್ಲಿಸದಿರುವಂತೆ ಆಡಳಿತ ಇಲಾಖೆಗೆ ತಿಳಿಸಿರುತ್ತದೆ."<br><br>ಆರ್ಥಿಕ ಇಲಾಖೆಯಿಂದ ಅನುಮೋದನೆ ದೊರೆತ ನಂತರ ಕಾಮಗಾರಿಯನ್ನು ಕೈಗೆತ್ತಿಕೊಂಡು ಪೂರ್ಣಗೊಳಿಸಲು ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ: MID 196 LAQ 2021

(ಜೆ.ಸಿ.ಮಾಧುಸ್ವಾಮಿ)
ಸಣ್ಣ ನೀರಾವರಿ ಸಚಿವರು.

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2272 |
| ಉತ್ತರಿಸಬೇಕಾಗಿದ್ದ ದಿನಾಂಕ | : | 23.03.2021 |
| ಸದಸ್ಯರ ಹೆಸರು | : | ಶ್ರೀ ವೇದವ್ಯಾಸ ಕಾಮತ್ ಡಿ. (ಮಂಗಳೂರು ನಗರ ದಕ್ಷಿಣ) |
| ಉತ್ತರಿಸುವ ಸಚಿವರು | : | ಮಾನ್ಯ ಯುವ ಸಬಲೀಕರಣ ಮತ್ತು ಕ್ರೀಡಾ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು. |

| ಕ್ರ ಸ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಯುವ ಸಬಲೀಕರಣ ಮತ್ತು ಕ್ರೀಡಾ ಕೇಂದ್ರಗಳಲ್ಲಿ ಕ್ರೀಡಾ ತರಬೇತಿದಾರರು ಮತ್ತು ಜಿಲ್ಲಾ ಮಟ್ಟದ ಅಧಿಕಾರಿಗಳು ಮತ್ತು ಸಿಬ್ಬಂದಿಗಳ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಈ ಅಧಿಕಾರಿ ಹಾಗೂ ಸಿಬ್ಬಂದಿಗಳನ್ನು ಪೂರ್ಣ ಪ್ರಮಾಣದಲ್ಲಿ ನಿಯೋಜಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಈ ಕೆಳಕಂಡಂತೆ ಕ್ರಮ ವಹಿಸಲಾಗಿರುತ್ತದೆ:<br>• ಗುಂಪು 'ಬಿ' ವೃಂದದ ಸಹಾಯಕ ನಿರ್ದೇಶಕರ 02 (ಎರಡು) ನೇರ ನೇಮಕಾತಿ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮ ವಹಿಸಲಾಗುತ್ತಿದೆ.<br>• ದ್ವಿತೀಯ ದರ್ಜೆ ಸಹಾಯಕರ 02 (ಎರಡು) ಹುದ್ದೆಗಳು ಮತ್ತು ಸಹಾಯಕ ಗ್ರಂಥಪಾಲಕರ 01 (ಒಂದು) ಹುದ್ದೆಯನ್ನು ಭರ್ತಿ ಮಾಡಲು ಕರ್ನಾಟಕ ಲೋಕಸೇವಾ ಆಯೋಗಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದೆ.<br>• ವಾಹನ ಚಾಲಕರ 03 (ಮೂರು) ನೇರ ನೇಮಕಾತಿ ಹುದ್ದೆಯಲ್ಲಿ 01 (ಒಂದು) ಹುದ್ದೆಯನ್ನು ಭರ್ತಿ ಮಾಡಲು ಕರ್ನಾಟಕ ಲೋಕಸೇವಾ ಆಯೋಗಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ. ಇನ್ನುಳಿದ ಖಾಲಿ ಇರುವ 02 (ಎರಡು) ಹುದ್ದೆಗಳ ಎದುರಾಗಿ ಹೊರಗುತ್ತಿಗೆ ಆಧಾರದ ಮೇರೆಗೆ ವಾಹನ ಚಾಲಕರ ಸೇವೆಯನ್ನು ಪಡೆಯಲಾಗಿರುತ್ತದೆ.<br>• ಇಲಾಖೆಯಲ್ಲಿ ಖಾಲಿ ಇರುವ ಗುಂಪು 'ಸಿ' ವೃಂದದ ಪ್ರಥಮ ದರ್ಜೆ ಸಹಾಯಕರು, ಶೀಘ್ರಲಿಪಿಗಾರರು, ದ್ವಿತೀಯ ದರ್ಜೆ ಸಹಾಯಕರು ಮತ್ತು ಬೆರಳಚ್ಚುಗಾರರ ನೇರ ನೇಮಕಾತಿ ಹುದ್ದೆಗಳನ್ನು ಮತ್ತು ಗುಂಪು 'ಡಿ' ವೃಂದದ ಹುದ್ದೆಗಳನ್ನು ಅನುಕಂಪದ ಆಧಾರದ ಮೇರೆಗೆ ಭರ್ತಿಮಾಡಲು ಪ್ರಾದೇಶಿಕ ಆಯುಕ್ತರು, ಬೆಂಗಳೂರು, ಮೈಸೂರು, ಕಲ್ಬುರ್ಗಿ ಮತ್ತು ಬೆಳಗಾವಿ ವಿಭಾಗ ಇಲ್ಲಿಗೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ.<br>• ಖಾಲಿ ಇರುವ ಮುಂಬಡ್ತಿ ಹುದ್ದೆಗಳನ್ನು ಅರ್ಹ |

| | | |
|---|---|---|
| | | ಅಭ್ಯರ್ಥಿಗಳು ಲಭ್ಯತೆಯ ಅನುಸಾರ ಭರ್ತಿ ಮಾಡಲಾಗುತ್ತಿದೆ.<br>• ಗುತ್ತಿಗೆ ಆಧಾರದಲ್ಲಿ 50 ತರಬೇತುದಾರರ ಸೇವೆಯನ್ನು ಪಡೆಯಲು ಕ್ರಮ ವಹಿಸಲಾಗಿದೆ. |
| ಇ) | ಈ ಇಲಾಖೆಯ ಜಿಲ್ಲಾ ಮಟ್ಟದ ಅಧಿಕಾರಿಗಳು ಹಾಗೂ ಸಿಬ್ಬಂದಿಗಳು ವಿವಿಧ ಇಲಾಖೆಗಳಲ್ಲಿ ಹೆಚ್ಚುವರಿಯಾಗಿ ನಿಯೋಜನೆ ಮೇರೆಗೆ ಕರ್ತವ್ಯ ನಿರ್ವಹಿಸುತ್ತಿರಲು ಕಾರಣಗಳೇನು; | ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ಯಾವುದೇ ಜಿಲ್ಲಾ ಮಟ್ಟದ ಅಧಿಕಾರಿಗಳು ಹಾಗೂ ಸಿಬ್ಬಂದಿಗಳು ಇತರೆ ಇಲಾಖೆಗಳಲ್ಲಿ ಹೆಚ್ಚುವರಿಯಾಗಿ ನಿಯೋಜನೆ ಮೇರೆಗೆ ಕರ್ತವ್ಯ ನಿರ್ವಹಿಸುತ್ತಿರುವುದಿಲ್ಲ. |
| ಈ) | ನಿಯೋಜನೆಯ ಮೇರೆಗೆ ವಿವಿಧ ಇಲಾಖೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಈ ಇಲಾಖೆಯ ಸಿಬ್ಬಂದಿಗಳ ಸಂಪೂರ್ಣ ಮಾಹಿತಿ ನೀಡುವುದು? (ಮಂಗಳೂರು ದಕ್ಷಿಣ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಗೆ ಒಳಪಡುವವರ ವಿವರ ನೀಡುವುದು) | ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ಗುಂಪು-"ಡಿ" ನೌಕರರಾದ ಶ್ರೀ ಜಿ. ಭೈರಪ್ಪ ಇವರು ಮಾತ್ರ ಪ್ರಸ್ತುತ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ನಿಯೋಜನೆ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಉಳಿದಂತೆ ಈ ಇಲಾಖೆಯ ಯಾವುದೇ ಸಿಬ್ಬಂದಿ ಇತರೆ ಇಲಾಖೆಗಳಲ್ಲಿ ನಿಯೋಜನೆ ಮೇರೆಗೆ ಕರ್ತವ್ಯ ನಿರ್ವಹಿಸುತ್ತಿರುವುದಿಲ್ಲ. |

ವೈಎಸ್‌ಡಿ-ಇಬಿಬಿ/71/2021

(ಡಾ|| ನಾರಾಯಣ ಗೌಡ)
ಯುವ ಸಬಲೀಕರಣ ಮತ್ತು ಕ್ರೀಡಾ ಹಾಗೂ
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಸಚಿವರು.

ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2274
2. ಸದಸ್ಯರ ಹೆಸರು : ಶ್ರೀ ರಾಘವೇಂದ್ರ ಬಸವರಾಜ್ ಹಿಟ್ನಾಳ್ ಕೆ.
3. ಉತ್ತರಿಸಬೇಕಾದ ದಿನಾಂಕ : 23.03.2021.
4. ಉತ್ತರಿಸುವವರು : ಸಣ್ಣ ನೀರಾವರಿ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕೊಪ್ಪಳ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಸಣ್ಣ ನೀರಾವರಿ ಕೆರೆಗಳ ಸಂಖ್ಯೆ ಎಷ್ಟು; (ಗ್ರಾಮವಾರು ಮಾಹಿತಿ ನೀಡುವುದು) | ಕೊಪ್ಪಳ ವಿಧಾನಸಭಾ ಕ್ಷೇತ್ರದಲ್ಲಿ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿ 5 ಸಣ್ಣ ನೀರಾವರಿ ಕೆರೆಗಳು ಮತ್ತು 2 ಜಿನುಗು ಕೆರೆಗಳು, ಒಟ್ಟು 7 ಕೆರೆಗಳು ಇರುತ್ತವೆ. ಗ್ರಾಮವಾರು ಮಾಹಿತಿಯನ್ನು ಅನುಬಂಧದಲ್ಲಿ ಸಲ್ಲಿಸಲಾಗಿದೆ. |
| ಆ | ಸದರಿ, ಕೆರೆಗಳ ಅಭಿವೃದ್ಧಿಗೆ 3 ವರ್ಷಗಳಿಂದ ಕೊಪ್ಪಳ ವಿಧಾನಸಭಾ ಕ್ಷೇತ್ರಕ್ಕೆ ವಿವಿಧ ಲೆಕ್ಕಶೀರ್ಷಿಕೆಯಡಿಯಲ್ಲಿ ವಿವಿಧ ಯೋಜನೆಗಳಡಿಯಲ್ಲಿ ಇಲಾಖೆಯಿಂದ ಮಂಜೂರಾಗಿರುವ ಅನುದಾನವೆಷ್ಟು; | ಕಳೆದ ಮೂರು ವರ್ಷಗಳಲ್ಲಿ ಕೊಪ್ಪಳ ವಿಧಾನಸಭಾ ಕ್ಷೇತ್ರದಲ್ಲಿ ಕೆರೆಗಳ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಂಡಿರುವುದಿಲ್ಲ. |
| ಇ | ಈ ಪೈಕಿ ಬಿಡುಗಡೆಯಾಗಿರುವ ಅನುದಾನವೆಷ್ಟು, ಹಾಗೂ ಬಳಕೆ ಮಾಡಿರುವ ಅನುದಾನ ಎಷ್ಟು; | |
| ಈ | ಈ ಯೋಜನೆಗಳಲ್ಲಿ ಕೈಗೆತ್ತಿಕೊಂಡಿರುವ ಕಾಮಗಾರಿಗಳಾವುವು? (ಸಂಪೂರ್ಣ ವಿವರ ನೀಡುವುದು) | |

ಕಡತ ಸಂಖ್ಯೆ: ಎಂಐಡಿ 200 ಎಲ್‌ಎಕ್ಯೂ2021

(ಜೆ.ಸಿ ಮಾಧುಸ್ವಾಮಿ)
ಸಣ್ಣ ನೀರಾವರಿ ಸಚಿವರು.

ವಿಧಾನಸಭೆಯ ಸದಸ್ಯರಾದ ಶ್ರೀ ರಾಘವೇಂದ್ರ ಬಸವರಾಜ್ ಹಿಟ್ನಾಳ್ ಕೆ.(ಕೊಪ್ಪಳ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2274ಕ್ಕೆ ಅನುಬಂಧ

ಕೊಪ್ಪಳ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಸಣ್ಣ ನೀರಾವರಿ ಕೆರೆಗಳ ವಿವರ

| ಕ್ರ.ಸಂ. | ತಾಲ್ಲೂಕು | ಗ್ರಾಮ | ಕೆರೆಯ ಹೆಸರು | ಅಚ್ಚುಕಟ್ಟು (ಹೆಕ್ಟೇರ್ ಗಳಲ್ಲಿ) |
|---|---|---|---|---|
| 1 | 2 | 3 | 4 | 5 |
| 1 | ಕೊಪ್ಪಳ | ಗಿಣಿಗೇರಾ | ಗಿಣಿಗೇರಾ ಕೆರೆ | 84 |
| 2 | ಕೊಪ್ಪಳ | ಕೆರೆಹಳ್ಳಿ | ಕೆರೆಹಳ್ಳೀ ಕೆರೆ | 103 |
| 3 | ಕೊಪ್ಪಳ | ಹಿರೇಕಾಸನಕಂಡಿ | ಹಿರೇಕಾಸನಕಂಡಿ ಕೆರೆ | 49 |
| 4 | ಕೊಪ್ಪಳ | ಘಟರೆಡ್ಡಿಹಾಳ | ಘಟರೆಡ್ಡಿಹಾಳ ಕೆರೆ | 66 |
| 5 | ಕೊಪ್ಪಳ | ಗಬ್ಬೂರು | ಗಬ್ಬೂರು ಕೆರೆ | 155 |
| 6 | ಕೊಪ್ಪಳ | ಹಣವಾಳ | ಹಣವಾಳ ಜಿನುಗು ಕೆರೆ | 40 |
| 7 | ಕೊಪ್ಪಳ | ಹಂದ್ರಾಳ | ಹಂದ್ರಾಳ ಜಿನುಗು ಕೆರೆ | 40 |
| | | | ಒಟ್ಟು | 537 |

## ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2281 |
| ಮಾನ್ಯ ಸದಸ್ಯರ ಹೆಸರು | ಶ್ರೀ ಬಸವನಗೌಡ ದದ್ದಲ (ರಾಯಚೂರು ಗ್ರಾಮಾಂತರ) |
| ಉತ್ತರಿಸಬೇಕಾದ ದಿನಾಂಕ | 23-03-2021 |
| ಉತ್ತರಿಸಬೇಕಾದವರು | ಅಬಕಾರಿ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಯಚೂರು ಜಿಲ್ಲೆಯಲ್ಲಿ ಅಕ್ರಮ ಮದ್ಯ ಮಾರಾಟ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಈ ಬಗ್ಗೆ ಸರ್ಕಾರ ಯಾವ ಕ್ರಮ ಕೈಗೊಳ್ಳಲಾಗಿದೆ; (ಸಂಪೂರ್ಣ ವಿವರ ನೀಡುವುದು) | ರಾಯಚೂರು ಜಿಲ್ಲೆಯಲ್ಲಿ ಕೆಲವು ವ್ಯಕ್ತಿಗಳು ಸ್ವಲಾಭಕ್ಕಾಗಿ ಅನಧಿಕೃತ ಸ್ಥಳದಲ್ಲಿ ಸೇವನೆಗಾಗಿ ಅಕ್ರಮವಾಗಿ ಮದ್ಯ ಮಾರಾಟ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆ.<br>ಇಲಾಖೆಯು ಅಕ್ರಮ ಮದ್ಯ ಮಾರಾಟವನ್ನು ತಡೆಗಟ್ಟಲು ಅಬಕಾರಿ ಕಾಯ್ದೆ ಮತ್ತು ತತ್ಸಂಬಂಧ ನಿಯಮಗಳ ಜಾರಿಗೊಳಿಸುವಿಕೆ ಕ್ರಮಗಳನ್ನು ಚುರುಕುಗೊಳಿಸಲಾಗಿದೆ. ಅಲ್ಲದೆ ಈ ಕುರಿತು ಪೊಲೀಸ್ ಇಲಾಖೆಯೂ ಸಹ ನಿರಂತರ ಕಾರ್ಯಾಚರಣೆ ನಡೆಸುತ್ತಿದ್ದು, ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ 2 ತಿಂಗಳಿಗೊಮ್ಮೆ ನಡೆಯುವ ಸಮನ್ವಯ ಸಮಿತಿ ಸಭೆಯಲ್ಲೂ ಅಬಕಾರಿ ಅಕ್ರಮ ಕುರಿತು ಅಗತ್ಯ ನಿರ್ದೇಶನಗಳನ್ನು ನೀಡಲಾಗುತ್ತಿದೆ. ಅಬಕಾರಿ ಇಲಾಖೆಯ ಸಿಬ್ಬಂದಿಯು ಸದಾ ಕಾಲ ಜಾಗೃತರಾಗಿದ್ದು ನಿರಂತರ ದಾಳಿ ಕಾರ್ಯ ನಡೆಸಿ, ಅಕ್ರಮ ಮದ್ಯ ಮಾರಾಟವಾಗದಂತೆ ಎಚ್ಚರಿಕೆ ವಹಿಸುವಂತೆ ನಿರ್ದೇಶಿಸಲಾಗಿದೆ. |
| ಆ) | ಈ ಜಿಲ್ಲೆಯಲ್ಲಿ ಅಕ್ರಮವಾಗಿ ಮದ್ಯ ತಯಾರಿಸಿ ಮಾರಾಟ ಮಾಡುತ್ತಿರುವುದು ಸರ್ಕಾರಕ್ಕೆ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಎಷ್ಟು ಪ್ರಕರಣಗಳು ದಾಖಲಾಗಿವೆ; ಈ ಬಗ್ಗೆ ಸರ್ಕಾರ ತೆಗೆದುಕೊಂಡ ಕ್ರಮಗಳೇನು; (ಕಳೆದ ಮೂರು ವರ್ಷಗಳ ಸಂಪೂರ್ಣ ವಿವರ ನೀಡುವುದು) | ರಾಯಚೂರು ಜಿಲ್ಲೆಯಲ್ಲಿ ಅಕ್ರಮ ಮದ್ಯ ತಯಾರಿಸಿ ಮಾರಾಟ ಮಾಡಿರುವ ಪ್ರಕರಣಗಳು ಯಾವುದೂ ವರದಿಯಾಗಿರುವುದಿಲ್ಲ. |

<table>
<tr>
<td>ಇ)</td>
<td>ಸದರಿ ಜಿಲ್ಲೆಯಲ್ಲಿ ಅಕ್ರಮವಾಗಿ ಸೇಂದಿ (ಪೌಡರ್)ಗಳಿಂದ ಮದ್ಯ ತಯಾರಿಸಿ ಮಾರಾಟ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಎಷ್ಟು ಪ್ರಕರಣಗಳು ದಾಖಲಾಗಿವೆ; ಈ ಕುರಿತು ಸರ್ಕಾರ ತೆಗೆದುಕೊಂಡ ಕ್ರಮಗಳೇನು?; (ಕಳೆದ ಮೂರು ವರ್ಷಗಳ ಸಂಪೂರ್ಣ ವಿವರ ನೀಡುವುದು)</td>
<td>ರಾಯಚೂರು ಜಿಲ್ಲೆಯಲ್ಲಿ ಅಕ್ರಮವಾಗಿ ಸೇಂದಿ ಹಾಗೂ ಕೃತಕವಾಗಿ ಸೇಂದಿಯನ್ನು ತಯಾರಿಸಿ ಮಾರಾಟ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆ. ಇಂತಹ ಅಕ್ರಮವನ್ನು ತಡೆಗಟ್ಟಲು ಕಟ್ಟುನಿಟ್ಟಿನ ಜಾರಿ ಮತ್ತು ತನಿಖಾ ಕಾರ್ಯಗಳನ್ನು ಕೈಗೊಳ್ಳಲಾಗಿದೆ. ಗಸ್ತು ಸಮಯದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಜನಜಾಗೃತಿ ಸಭೆಗಳನ್ನು ನಡೆಸುವ ಮೂಲಕ ಸಾರ್ವಜನಿಕರಲ್ಲಿ ಅರಿವು ಮೂಡಿಸಲಾಗುತ್ತಿದೆ. ಅಕ್ರಮ ತಯಾರಿ ಹಾಗೂ ಮಾರಾಟದಂತಹ ಪ್ರಕರಣಗಳು ಕಂಡು ಬಂದಲ್ಲಿ ಮಾಹಿತಿ ನೀಡುವಂತೆ ಕೋರಿ ಕರ ಪತ್ರಗಳನ್ನು ಹಂಚಲಾಗುತ್ತಿದೆ.<br>ಕಳೆದ ಮೂರು ವರ್ಷಗಳಲ್ಲಿ ದಾಖಲಾದ ಪ್ರಕರಣಗಳ ವಿವರ ಕೆಳಕಂಡಂತಿದೆ;
<table>
<tr><th>ಕ್ರಸಂ</th><th>ಅಬಕಾರಿ ವರ್ಷ</th><th>ದಾಖಲಿಸಿದ ಪ್ರಕರಣಗಳ ಸಂಖ್ಯೆ</th></tr>
<tr><td>1</td><td>2018–19</td><td>93</td></tr>
<tr><td>2</td><td>2019–20</td><td>99</td></tr>
<tr><td>3</td><td>2020–21<br>(ಫೆಬ್ರವರಿ ಅಂತ್ಯಕ್ಕೆ)</td><td>24</td></tr>
<tr><td></td><td>ಒಟ್ಟು</td><td>216</td></tr>
</table>
</td>
</tr>
</table>

ಆಇ 44 ಇಎಲ್‌ಕ್ಯೂ 2021

(ಕೆ. ಗೋಪಾಲಯ್ಯ)
ಅಬಕಾರಿ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3274
ಸದಸ್ಯರ ಹೆಸರು : ಶ್ರೀ ರಾಮಪ್ಪ ಎಸ್. (ಹರಿಹರ)
ಉತ್ತರಿಸುವ ದಿನಾಂಕ : 23.03.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹರಿಹರ ತಾಲ್ಲೂಕಿನ ಭದ್ರಾ ನದಿಗೆ ಕಟ್ಟಲಾದ ಎಲ್ಲಾ ಚಾನಲ್‌ಗಳು ದುರಸ್ತಿಯಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br>ಭದ್ರಾ ಯೋಜನೆಯಡಿ ಹರಿಹರ ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ ಕಾಲುವೆಗಳ ಆಧುನೀಕರಣ ಕಾಮಗಾರಿಗಳನ್ನು 2007-08ನೇ ಸಾಲಿನಲ್ಲಿ ಕೈಗೊಂಡು ಪೂರ್ಣಗೊಳಿಸಲಾಗಿರುತ್ತದೆ. ಯೋಜನೆಗೆ ಲಭ್ಯವಾಗುವ ನಿರ್ವಹಣಾ ಅನುದಾನದಲ್ಲಿ ಆದ್ಯತೆ ಮೇಲೆ ನಿರ್ವಹಣಾ ಕಾಮಗಾರಿಗಳನ್ನು ಕೈಗೊಂಡು ಅಚ್ಚುಕಟ್ಟು ಪ್ರದೇಶಕ್ಕೆ ಸಮರ್ಪಕವಾಗಿ ನೀರನ್ನು ಒದಗಿಸಲಾಗುತ್ತಿದೆ. |
| ಆ) | ಈ ಬಗ್ಗೆ ಎಷ್ಟು ಚಾನಲ್‌ಗಳ ದುರಸ್ತಿಗಾಗಿ ಅನುದಾನ ಮೀಸಲಿಡಲಾಗಿದೆ; (ವಿವರ ನೀಡುವುದು) | 2020-21 ನೇ ಸಾಲಿನಲ್ಲಿ ಲಭ್ಯವಿರುವ ವಾರ್ಷಿಕ ನಿರ್ವಹಣಾ ಅನುದಾನದಲ್ಲಿ, ತುರ್ತಾಗಿ ಕೈಗೊಳ್ಳಬೇಕಾಗಿರುವ ಕಾಲುವೆ ದುರಸ್ತಿ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದ್ದು, ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |

ಸಂಖ್ಯೆ:ಜಸಂಇ 79 ಎಂಎಲ್ಎ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಅನುಬಂಧ

2020-21 ನೇ ಸಾಲಿನಲ್ಲಿ ಭದ್ರಾ ನಾಲೆಯಲ್ಲಿ ಕೈಗೊಂಡ ದುರಸ್ತಿ ಕಾಮಗಾರಿಗಳ ವಿವರಗಳು.

| Sl. No. | Name of work | Estimated Amount (Rs. In Lakhs) |
|---|---|---|
| 1 | Repairs and Improvements to Damaged Structures in 9th A & 9th B Z/D under MBC | 3.00 |
| 2 | Repairs to Distributory head sluice gates arrangements from Ch:0.00 to 32.00Km of MBC | 2.00 |
| 3 | Repairs to structure and gates of 10th,12th,12th A & 14th Z/D under MBC | 5.00 |
| 4 | Repairs to structure and gates of 11th A,C,D,E,13th,16th & 17th Z/D under MBC | 5.00 |
| 5 | Repairs & Reconditioning of Godbole gates of Devarabelakere Pickup Project. | 5.00 |
| 6 | Repairs to structure and gates ofMinors& PO's of RBC & PO's of LBC under Devarabelakere Pickup Project. | 5.00 |
| 7 | Removal Of Silt and Jungle in selected Reaches of 13th 14th 15th 16th and 17th Zone Distributaries under MBC | 8.00 |
| 8 | Removal Of Silt and Jungle in selected Reaches of 12th 11th A,B,C,D,E and F Zone Distributaries under MBC | 3.00 |
| 9 | Removal Of Silt and Jungle in Hindaskatte Pickup Under 13th Zone Distributory | 4.00 |
| 10 | Removal of silt & jungle in selected reaches of RBC from ch:9.00km to 11.50km and Bannikodu minor canal under D.B.Kere pickup project | 7.00 |
| 11 | Repairs to Gates of HBC, 10th Zone, 12th-A, 12th-B and 13th Zone Distributories and Minors. | 5.00 |
| | Total | 52.00 |

*****

# ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3298 |
| 2 | ಸದಸ್ಯರ ಹೆಸರು | : | ಶ್ರೀ ಎಸ್.ಎನ್ ನಾರಾಯಣಸ್ವಾಮಿ ಕೆ.ಎಂ (ಬಂಗಾರಪೇಟೆ) |
| 3 | ಉತ್ತರಿಸುವ ದಿನಾಂಕ | : | 23.03.2021 |
| 4 | ಉತ್ತರಿಸುವ ಸಚಿವರು | : | ಮಾನ್ಯ ಯೋಜನಾ ಸಚಿವರು, ಯೋಜನೆ,ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ |

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>(ಅ)</td><td>2018-19ನೇ ಸಾಲಿನಿಂದ ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿ ಅನುದಾನ ಬಿಡುಗಡೆ ಮಾಡಲಾದ ಅನುದಾನದ ಮೊತ್ತವೆಷ್ಟು; (ವಿವರಗಳನ್ನು ನೀಡುವುದು)</td><td>2018-19ನೇ ಸಾಲಿನಿಂದ 2020-21 ನೇ ವರೆಗೆ ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿ ಅನುದಾನ ಬಿಡುಗಡೆ ಮಾಡಲಾದ ವಿವರವು ಈ ಕೆಳಕಂಡಂತಿದೆ.<br>
<table>
<tr><th>ವರ್ಷ</th><th>ಬಿಡುಗಡೆಯಾದ ಅನುದಾನ (ರೂ.ಕೋಟಿಗಳಲ್ಲಿ)</th></tr>
<tr><td>2018-19</td><td>462.99</td></tr>
<tr><td>2019-20</td><td>296.09</td></tr>
<tr><td>2020-21</td><td>599.28</td></tr>
</table></td></tr>
<tr><td>(ಆ)</td><td>ಶಾಸಕರ ಪ್ರದೇಶಾಭಿವೃದ್ಧಿ ಅನುದಾನವನ್ನು ಸಕಾಲದಲ್ಲಿ ಬಿಡುಗಡೆ ಮಾಡಲಾಗುತ್ತಿದೆಯೇ;</td><td>ಹೌದು</td></tr>
<tr><td>(ಇ)</td><td>ಹಾಗಿಲ್ಲದಿದ್ದಲ್ಲಿ, ಈ ಬಗ್ಗೆ ಸರ್ಕಾರಕ್ಕಿರುವ ಅಡೆತಡೆಗಳೇನು;</td><td>ಆರ್ಥಿಕ ಇಲಾಖೆಯ ನಿರ್ದೇಶನದಂತೆ ಬಿಡುಗಡೆಯಾದ ಅನುದಾನ ಮತ್ತು ಆರಂಭಿಕ ಶಿಲ್ಕು ಸೇರಿ ಒಟ್ಟು ಅನುದಾನದಲ್ಲಿ ಶೇ.75ರಷ್ಟು ವೆಚ್ಚವಾದಲ್ಲಿ ಮಾತ್ರ ಮುಂದಿನ ಕಂತಿನ ಅನುದಾನ ಬಿಡುಗಡೆ ಮಾಡಲಾಗುತ್ತಿದೆ. ಶೇ. 75 ರಷ್ಟು ವೆಚ್ಚವಾಗದಿದ್ದಲ್ಲಿ ಮುಂದಿನ ಕಂತಿನ ಅನುದಾನ ಬಿಡುಗಡೆಗೆ ಅವಕಾಶವಿರುವುದಿಲ್ಲ.</td></tr>
</table>

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>(ಈ)</td><td>ಕಳೆದ ಮೂರು ವರ್ಷಗಳಿಂದ ಇದುವರೆಗೂ ಶಾಸಕರ ಪ್ರದೇಶಾಭಿವೃದ್ಧಿ ಅನುದಾನದಡಿಯಲ್ಲಿ ವಿನಿಯೋಗಿಸದ ಬಾಕಿ ಉಳಿದಿರುವ ಅನುದಾನ ಮೊತ್ತವೆಷ್ಟು;</td><td>ಕಳೆದ ಮೂರು ವರ್ಷಗಳಿಂದ ಇದುವರೆಗೂ ಶಾಸಕರ ಪ್ರದೇಶಾಭಿವೃದ್ಧಿ ಅನುದಾನದಡಿಯಲ್ಲಿ ವಿನಿಯೋಗಿಸದೆ ಬಾಕಿ ಉಳಿದಿರುವ ಅನುದಾನ ವಿವರಗಳು ಕೆಳಕಂಡಂತಿದೆ.<br><br>
<table>
<tr><th>ಕ್ರ ಸಂ</th><th>ವರ್ಷ</th><th>ವಿನಿಯೋಗಿಸದೇ ಉಳಿದಿರುವ ಅನುದಾನ (ರೂ.ಕೋಟಿಗಳಲ್ಲಿ)</th></tr>
<tr><td>1</td><td>2017-18</td><td>939.74</td></tr>
<tr><td>2</td><td>2018-19</td><td>948.97</td></tr>
<tr><td>3</td><td>2019-20</td><td>672.55</td></tr>
</table></td></tr>
<tr><td>(ಉ)</td><td>ಈ ನಿಟ್ಟಿನಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು?</td><td>ಸರ್ಕಾರವು ಶಾಸಕರ ಪ್ರದೇಶಾಭಿವೃದ್ಧಿ ಅನುದಾನವನ್ನು ನಿಗದಿತ ಕಾಲಾವಧಿಯಲ್ಲಿ ವೆಚ್ಚ ಮಾಡಲು ದಿನಾಂಕ: 23.06.2020 ರಂದು ಮಾನ್ಯ ಮುಖ್ಯ ಕಾರ್ಯದರ್ಶಿಯವರಿಂದ ಎಲ್ಲಾ ಜಿಲ್ಲಾಧಿಕಾರಿಗಳಿಗೆ ನಿರ್ದೇಶನ ನೀಡಲಾಗಿದೆ ಹಾಗೂ ದಿನಾಂಕ:23.02.2021 ರಂದು ಖುದ್ದು ವಿಡಿಯೋ ಸಂವಾದದ ಮೂಲಕ ರಾಜ್ಯದ ಎಲ್ಲಾ ಜಿಲ್ಲಾಧಿಕಾರಿಗಳಿಗೆ ಸೂಕ್ತ ನಿರ್ದೇಶನ ನೀಡಲಾಗಿದ್ದು, ಪ್ರತಿ ಜಿಲ್ಲೆಗೂ ಭೇಟಿ ನೀಡಿ ಪ್ರಗತಿ ಪರಿಶೀಲನೆ ನಡೆಸುತ್ತಿದ್ದು, ಶೀಘ್ರ ಅನುಷ್ಠಾನಕ್ಕೆ ಕ್ರಮ ವಹಿಸಲಾಗುತ್ತಿದೆ.</td></tr>
</table>

**ಸಂಖ್ಯೆ: ಪಿಡಿಎಸ್ 31 ಕೆಎಲ್ಎಸ್ 2021**

**(ಡಾ|| ನಾರಾಯಣಗೌಡ)**
ಸಚಿವರು,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3305 |
| ಸದಸ್ಯರ ಹೆಸರು | : | ಶ್ರೀ ಅಜಯ್ ಧರ್ಮಸಿಂಗ್ ಡಾ॥ (ಜೇವರ್ಗಿ) |
| ಉತ್ತರಿಸಬೇಕಾದ ದಿನಾಂಕ | : | 23.03.2021 |
| ಉತ್ತರಿಸುವ ಸಚಿವರು | : | ಮಾನ್ಯ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಲ್ಲಿ ಕಲ್ಯಾಣ ಕರ್ನಾಟಕ ಅಭಿವೃದ್ಧಿ ಮಂಡಳಿಗೆ ಬಿಡುಗಡೆಯಾಗಿರುವ ಅನುದಾನದ ಮೊತ್ತವೆಷ್ಟು; (ವರ್ಷಾವಾರು ಮಾಹಿತಿ ನೀಡುವುದು) | ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ಕಳೆದ ಮೂರು ವರ್ಷಗಳಿಂದ ಬಿಡುಗಡೆಯಾಗಿರುವ ಅನುದಾನದ ವಿವರ ಈ ಕೆಳಕಂಡಂತಿದೆ. (ಕೋಷ್ಟಕ 1 ನೋಡಿ) |
| ಆ) | ಬಿಡುಗಡೆಗೊಳಿಸಿದ ಅನುದಾನಕ್ಕನುಗುಣವಾಗಿ ಆಯಾ ಸಾಲಿನಲ್ಲಿಯೇ ಮಂಜೂರಾದ ಯಾವ ಕಾಮಗಾರಿಗಳನ್ನು ನಿಗದಿತ ಕಾಲಾವಧಿಯಲ್ಲಿ ಪೂರ್ಣಗೊಳಿಸಲಾಗಿದೆ ಹಾಗೂ ಬಾಕಿ ಇರುವ ಕಾಮಗಾರಿಗಳು ಯಾವುವು; (ಪೂರ್ಣ ಮಾಹಿತಿ ನೀಡುವುದು) | ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯಡಿ 2017-18, 2018-19 ಬಿಡುಗಡೆಗೊಳಿಸಿದ ಅನುದಾನಕ್ಕೆ ಅನುಗುಣವಾಗಿ ಮತ್ತು 2019-20ನೇ ಸಾಲಿನಲ್ಲಿ ಪೂರ್ಣಗೊಳಿಸಿರುವ ಪ್ರಗತಿಯಲ್ಲಿರುವ ಹಾಗೂ ಇನ್ನೂ ಪ್ರಾರಂಭವಾಗದೇ ಇರುವ ಕಾಮಗಾರಿಗಳ ವಿವರಗಳು ಈ ಕೆಳಗಿನಂತಿವೆ. (ಕೋಷ್ಟಕ 2 ನೋಡಿ) |

| ಆರ್ಥಿಕ ವರ್ಷ | ಮಂಡಳಿಗೆ ಬಿಡುಗಡೆ ಮಾಡಿದ ಅನುದಾನ (ರೂ.ಕೋಟಿಗಳ) |
|---|---|
| 2017-18 | 800.00 |
| 2018-19 | 1000.00 |
| 2019-20 | 1125.00 |

| ವರ್ಷ | ಒಟ್ಟು ಕಾಮಗಾರಿಗಳ ಸಂಖ್ಯೆ | ಪೂರ್ಣಗೊಳಿಸಿದ ಕಾಮಗಾರಿಗಳು | ಪ್ರಗತಿಯಲ್ಲಿರುವ ಕಾಮಗಾರಿಗಳು | ಪ್ರಾರಂಭಿಸಬೇಕದ ಕಾಮಗಾರಿಗಳು |
|---|---|---|---|---|
| 2017-18 | 4405 | 4316 | 89 | 0 |
| 2018-19 | 4137 | 3677 | 454 | 6 |
| 2019-20 | 4018 | 2288 | 1411 | 319 |
| **ಒಟ್ಟು** | **12560** | **10281** | **1954** | **325** |

<table>
<tr><th>ಕ್ರ ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಇ)</td><td>2020-21ನೇ ಸಾಲಿನಲ್ಲಿ ಯಾವ ಕಾಮಗಾರಿಗಳು ಹಾಗೂ ಎಷ್ಟು ಮೊತ್ತದ ಅಭಿವೃದ್ಧಿ ಕಾಮಗಾರಿಗಳ ಕ್ರಿಯಾಯೋಜನೆಗೆ ಮಂಜೂರಾಗಿ ನೀಡಲಾಗಿದೆ.</td><td>2020-21ನೇ ಸಾಲಿನಲ್ಲಿ ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ಈ ಕೆಳಗಿನ ಯೋಜನೆಗಳಿಗೆ ಹಂಚಿಕೆಯಾಗಿರುವ ರೂ.1061.13 ಕೋಟಿಗಳ ಕ್ರಿಯಾಯೋಜನೆಗೆ ಅನುಮೋದನೆ ನೀಡಲಾಗಿದೆ.<br>(ರೂ.ಲಕ್ಷಗಳಲ್ಲಿ)<br>
<table>
<tr><th>ಕ್ರ ಸಂ.</th><th>ವಿವರ</th><th>ಹಂಚಿಕೆ ಮಾಡಿದ ಅನುದಾನ</th><th>ಅನುಮೋದನೆ ನೀಡಿರುವ ಕ್ರಿಯಾಯೋಜನೆ</th></tr>
<tr><td>1</td><td>ಮೈಕ್ರೋ</td><td>68930.27</td><td>66040.24</td></tr>
<tr><td>2</td><td>ಮ್ಯಾಕ್ರೋ</td><td>29541.55</td><td>29541.55</td></tr>
<tr><td>3</td><td>ಅಧ್ಯಕ್ಷರ ವಿವೇಚನಾ ನಿಧಿ (CDQ)</td><td>1131.86</td><td>1131.86</td></tr>
<tr><td>4</td><td>ಸರ್ಕಾರದ ವಿವೇಚನಾ ನಿಧಿ (GDQ)</td><td>2263.72</td><td>2263.72</td></tr>
<tr><td>5</td><td>ಮುಖ್ಯಮಂತ್ರಿ ವಿವೇಚನಾ ನಿಧಿ (CMDQ)</td><td>3395.58</td><td>3395.58</td></tr>
<tr><td>6</td><td>ಪ್ರಾದೇಶಿಕ ನಿಧಿ (RF)</td><td>6791.16</td><td>2608.42</td></tr>
<tr><td>7</td><td>ಆಡಳಿತ (ADM)</td><td>1131.86</td><td>1131.86</td></tr>
<tr><td></td><td>ಒಟ್ಟು</td><td>113186.00</td><td>106113.23</td></tr>
</table></td></tr>
</table>

**ಪಿಡಿಎಸ್ 29 ಹೆಚ್‌ಕೆಡಿ 2021**

(ಡಾ॥ ನಾರಾಯಣಗೌಡ)
ಸಚಿವರು,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

226

## ಕರ್ನಾಟಕ ವಿಧಾನ ಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3306
2) ಸದಸ್ಯರ ಹೆಸರು : ಶ್ರೀ ಅಜಯ್ ಧರ್ಮಸಿಂಗ್ ಡಾ॥ (ಜೇವರ್ಗಿ)
3) ಉತ್ತರಿಸುವ ದಿನಾಂಕ: : 23-03-2021
4) ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಎರಡು ವರ್ಷಗಳಿಂದ ರಾಜ್ಯದಲ್ಲಿದ್ದ ಗ್ಯಾಸ್ ಸಿಲಿಂಡರ್ ಮತ್ತು ಪೆಟ್ರೋಲ್ ಹಾಗೂ ಡೀಸೆಲ್‌ನ ಪ್ರತಿ ಲೀಟರ್‌ನ ಬೆಲೆ ಎಷ್ಟಿತ್ತು; (ಮಾಸಿಕವಾರು ಹಾಗೂ ಪಟ್ಟಣವಾರು ಮಾಹಿತಿ ನೀಡುವುದು) | ಕಳೆದ 2 ವರ್ಷಗಳಲ್ಲಿ ರಾಜ್ಯದಲ್ಲಿ ಪೆಟ್ರೋಲ್ ಹಾಗೂ ಡೀಸೆಲ್‌ನ ಪ್ರತಿ ಲೀಟರ್‌ನ ಬೆಲೆ ವಿವರಗಳು ಈ ಕೆಳಕಂಡಂತೆ ಇರುತ್ತದೆ. (ಕೆಳಗಿನ ಕೋಷ್ಟಕ) ಅಡುಗೆ ಅನಿಲ ಸಿಲಿಂಡರ್‌ಗಳ ಬೆಲೆಯನ್ನು ಕೇಂದ್ರ ಸರ್ಕಾರವು ನಿಗದಿ ಮಾಡುವುದರಿಂದ, ಅಡುಗೆ ಅನಿಲ ಸಿಲಿಂಡರ್‌ಗಳ ಬೆಲೆ ನಿಗದಿಯು ರಾಜ್ಯ ಸರ್ಕಾರದ ನಿಯಂತ್ರಣದಲ್ಲಿ ಇರುವುದಿಲ್ಲ. |
| ಆ) | ಪ್ರಸ್ತುತ ಸದರಿ ತೈಲಗಳ ಪ್ರತಿ ಲೀಟರ್ ಮೇಲೆ ರಾಜ್ಯ ಸರ್ಕಾರವು ವಿಧಿಸುತ್ತಿರುವ ತೆರಿಗೆಯ ಮೊತ್ತವೆಷ್ಟು; | ಪೆಟ್ರೋಲ್ ಮತ್ತು ಡೀಸೆಲ್ ಮೇಲೆ ವಿಧಿಸುತ್ತಿರುವ ತೆರಿಗೆಯ ಮೊತ್ತ (ದಿನಾಂಕ 08-03-2021 ಅನ್ವಯವಾಗುವಂತೆ)<br>ಪೆಟ್ರೋಲ್ : ರೂ.23.54 ಪೈಸೆ ಪ್ರತಿ ಲೀಟರ್‌ಗೆ<br>ಡೀಸೆಲ್ : ರೂ.16.28 ಪೈಸೆ ಪ್ರತಿ ಲೀಟರ್‌ಗೆ<br>(ಮೂಲ ಬೆಲೆ ಮತ್ತು ಕೇಂದ್ರ ಅಬಕಾರಿ ಸುಂಕಗಳ ಮೇಲೆ ಪೆಟ್ರೋಲ್ 35% ಹಾಗೂ ಡೀಸೆಲ್ 24% ತೆರಿಗೆ) |

| ತಿಂಗಳು | ಪೆಟ್ರೋಲ್ ದರ (ರೂ.ಗಳಲ್ಲಿ) | | ಡೀಸೆಲ್ ದರ (ರೂ.ಗಳಲ್ಲಿ) | |
|---|---|---|---|---|
| | 2019-20 | 2020-21 | 2019-20 | 2020-21 |
| ಏಪ್ರಿಲ್ | 75.26 | 73.53 | 68.26 | 65.94 |
| ಮೇ | 75.56 | 73.52 | 68.92 | 65.94 |
| ಜೂನ್ | 74.00 | 73.52 | 68.55 | 65.94 |
| ಜುಲೈ | 72.79 | 83.06 | 66.42 | 76.59 |
| ಆಗಸ್ಟ್ | 75.37 | 83.13 | 68.29 | 77.99 |
| ಸೆಪ್ಟೆಂಬರ್ | 74.53 | 84.87 | 67.52 | 77.99 |
| ಅಕ್ಟೋಬರ್ | 77.23 | 83.82 | 69.84 | 74.82 |
| ನವೆಂಬರ್ | 75.35 | 83.82 | 68.04 | 74.74 |
| ಡಿಸೆಂಬರ್ | 77.48 | 85.17 | 68.04 | 76.85 |
| ಜನವರಿ | 77.70 | 86.59 | 70.27 | 78.39 |
| ಫೆಬ್ರವರಿ | 75.70 | 89.21 | 68.51 | 81.09 |
| ಮಾರ್ಚ್ | 73.94 | 94.21 | 66.29 | 86.35 |

.....2

| | | |
|---|---|---|
| ಇ) | ಸದರಿ ತೈಲಗಳ ಬೆಲೆ ಏರಿಕೆಯಿಂದ ಶ್ರೀಸಾಮಾನ್ಯರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯದಲ್ಲಿ ಪೆಟ್ರೋಲ್ ಮತ್ತು ಡೀಸೆಲ್ ಬೆಲೆ ಏರಿಕೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಈ) | ಹಾಗಿದ್ದಲ್ಲಿ, ಸದರಿ ತೈಲಗಳ ಮೇಲೆ ರಾಜ್ಯ ಸರ್ಕಾರ ವಿಧಿಸುತ್ತಿರುವ ತೆರಿಗೆಯನ್ನು ಕಡಿಮೆಗೊಳಿಸಲು ಕ್ರಮ ಕೈಗೊಳ್ಳುವುದೇ? | ಪೆಟ್ರೋಲ್ ಮತ್ತು ಡೀಸೆಲ್‌ಗಳ ಬೆಲೆಯು ಮಾರುಕಟ್ಟೆ ಆಧಾರಿತವಾಗಿದ್ದು, ಅವುಗಳ ಮಾರಾಟದ ಬೆಲೆಯಲ್ಲಿ ದಿನೇದಿನೇ ಬದಲಾವಣೆಗಳಾಗುತ್ತಿದೆ. ಮೂಲ ಬೆಲೆಯಲ್ಲಿ ಹೆಚ್ಚಳವಾದಾಗ ಅವುಗಳ ಮಾರಾಟದ ತೆರಿಗೆ ಹೆಚ್ಚಳವಾಗುತ್ತದೆ. ದಕ್ಷಿಣದ ರಾಜ್ಯಗಳಿಗೆ ಹೋಲಿಸಿದಾಗ ಕೇರಳ ರಾಜ್ಯ ಹೊರತುಪಡಿಸಿದರೆ ಪೆಟ್ರೋಲ್ ಬೆಲೆಯು ಕರ್ನಾಟಕದಲ್ಲಿಯೇ ಕಡಿಮೆ ಇರುತ್ತದೆ. ಡೀಸೆಲ್ ಬೆಲೆಯು ದಕ್ಷಿಣದ ಇತರ ರಾಜ್ಯಗಳಿಗಿಂತ ಕರ್ನಾಟಕದಲ್ಲಿಯೇ ಅತೀ ಕಡಿಮೆ ಇರುತ್ತದೆ. |

ಸಂಖ್ಯೆ: ಆಇ 43 ಸಿಎಸ್‌ಎಲ್ 2021

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

1.ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3331
2. ಸದಸ್ಯರ ಹೆಸರು : ಶ್ರೀ ಶಿವಣ್ಣ ಬಿ (ಆನೇಕಲ್)
3. ಉತ್ತರಿಸುವ ದಿನಾಂಕ : 23-03-2021
4. ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕೆ.ಪಿ.ಎಸ್.ಸಿ ಯು ನಡೆಸಿದ 2015ನೇ ಸಾಲಿನ ಗೆಜಿಟೆಡ್ ಪ್ರೊಬೆಷನರಿ ಹುದ್ದೆಗಳ ನೇಮಕಾತಿಯ ಕುರಿತಂತೆ ಕೆ.ಪಿ.ಎಸ್.ಸಿ.ಯು ಕರ್ನಾಟಕ ರಾಜ್ಯ ದತ್ತಾಂಶ ಕೇಂದ್ರ (Karnataka state data centre) (centre for e- governance) ಅಂದರೆ ಇ-ಆಡಳಿತ ಕೇಂದ್ರದಲ್ಲಿ ಮುಖ್ಯ ಪರೀಕ್ಷೆಯ ಡಿಜಿಟಲ್ ಮೌಲ್ಯ ಮಾಪನದಲ್ಲಿ ಅಭ್ಯರ್ಥಿಗಳು ಪಡೆದ ವಿಷಯವಾರು ಅಂಕಗಳನ್ನು kpscresults.karnataka.gov.in ಎಂಬ ವೆಬ್ ಡೊಮೈನ್‌ನ ಮೂಲಕ ಪ್ರಕಟಿಸಲಾಗಿಯೇ; | ಕರ್ನಾಟಕ ಲೋಕಸೇವಾ ಆಯೋಗವು ನೀಡಿರುವ ಮಾಹಿತಿಯಂತೆ, NIC (National Informatics Centre) ವತಿಯಿಂದ ಅಪ್ಲಿಕೇಷನ್ ತಯಾರಿಸಿ ಆಯಾ ಅಭ್ಯರ್ಥಿಗಳಿಗೆ ತಮ್ಮ ವಿಷಯವಾರು ಅಂಕಗಳು ಲಭ್ಯವಾಗುವಂತೆ ಅವಕಾಶ ಕಲ್ಪಿಸಿ ರಾಜ್ಯ ದತ್ತಾಂಶ ಕೇಂದ್ರದ ಮುಖಾಂತರ ಹೋಸ್ಟ್ ಮಾಡಲಾಗಿದ್ದು ದಿ:27-02-2020ರಂದು http:/www.kpscresults.karnataka.gov.in/gp2015 ಈ ಲಿಂಕ್‌ನಲ್ಲಿ ಅಂಕಗಳನ್ನು ಡೌನ್ ಲೋಡ್ ಮಾಡಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ. |
| ಆ | ಹೌದಾದಲ್ಲಿ, ಈ ವೆಬ್ ಡೊಮೈನ್‌ಗೆ ಹೊಂದಿದಂತಹ ಡೇಟಾಬೇಸ್‌ನ್ನು ಕರ್ನಾಟಕ ರಾಜ್ಯ ದತ್ತಾಂಶ ಕೇಂದ್ರ (Karnataka state data centre) (centre for e- governance) ಅಂದರೆ ಇ-ಆಡಳಿತ ಕೇಂದ್ರದಲ್ಲಿ ಕೆ.ಪಿ.ಎಸ್.ಸಿ ವತಿಯಿಂದ ನೋದಾಯಿಸಲಾಗಿದೆಯೇ ಅಥವಾ ಪಡೆಯಲಾಗಿದೆಯೇ; | ಹೌದು, ಪಡೆಯಲಾಗಿದೆ. |
| ಇ | Kpscresults.karnataka.gov.in ಎಂಬ ವೆಬ್ ಡೊಮೈನ್‌ಗೆ ಹೊಂದಿದಂತಹ ಡೇಟಾಬೇಸ್‌ನ್ನು ಕರ್ನಾಟಕ ರಾಜ್ಯ ದತ್ತಾಂಶ ಕೇಂದ್ರ (Karnataka state data | ಪ್ರಶ್ನೆ ಉದ್ಭವಿಸುವುದಿಲ್ಲ. |

| | | |
|---|---|---|
| | centre) (centre for e-governance) ಅಂದರೆ ಇ-ಆಡಳಿತ ಕೇಂದ್ರದಿಂದ ಪಡೆಯದೇ ಇದ್ದಲ್ಲಿ, ಯಾವ ಡೇಟಾಬೇಸ್ ಮತ್ತು ಸರ್ವರ್ ನಿಂದ 2015ನೇ ಸಾಲಿನ ಗೆಜೆಟೆಡ್ ಪ್ರೊಬೇಷನರಿ ಹುದ್ದೆಗಳ ನೇಮಕಾತಿಯ ಮುಖ್ಯ ಪರೀಕ್ಷೆಯ ಮೌಲ್ಯ ಮಾಪನದಲ್ಲಿ ಅಭ್ಯರ್ಥಿಗಳು ಪಡೆದ ವಿಷಯವಾರು ಅಂಕಪಟ್ಟಿಯನ್ನು (Subject wise marks statement) ಪ್ರಕಟಿಸಲಾಗಿದೆ; | |
| ಈ | 2015ನೇ ಸಾಲಿನ ಗೆಜೆಟೆಡ್ ಪ್ರೊಬೇಷನರಿ ಹುದ್ದೆಗಳ ನೇಮಕಾತಿಯ ಮುಖ್ಯ ಪರೀಕ್ಷೆಯ ಡಿಜಿಟಲ್ ಮೌಲ್ಯಮಾಪನದಲ್ಲಿ ಅಭ್ಯರ್ಥಿಗಳು ಪಡೆದ ವಿಷಯವಾರು ಅಂಕಪಟ್ಟಿಯನ್ನು (Subject wise marks statement) ಪ್ರಕಟಿಸಲು ಬಳಸಲಾದ ಸರ್ವರ್ ಮತ್ತು ಡೇಟಾ ಬೇಸ್‌ಗಳ ಹೆಸರನ್ನು ತಿಳಿಸುವುದು? | ಯಾವುದೇ ತಂತ್ರಾಂಶವನ್ನು ಬಳಸಲು Operating System ಹಾಗೂ Database ನ ಅವಶ್ಯಕತೆ ಇರುತ್ತದೆ. ಮೇಲ್ಕಂಡ ತಂತ್ರಾಂಶಕ್ಕೆ Windows Operating System ಹಾಗೂ MS SQL Database ಅನ್ನು ಬಳಸಲಾಗಿರುತ್ತದೆ. |

ಸಂಖ್ಯೆ: ಸಿಆಸುಇ 39 ಎಸ್‌ಎಸ್‌ಸಿ 2021

( ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3405 |
| ಮಾನ್ಯ ಸದಸ್ಯರ ಹೆಸರು | ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ) |
| ಉತ್ತರಿಸಬೇಕಾದ ದಿನಾಂಕ | 23-03-2021 |
| ಉತ್ತರಿಸಬೇಕಾದವರು | ಅಬಕಾರಿ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಅಬಕಾರಿ ಇಲಾಖೆಯು ನೀಡುತ್ತಿರುವ ವಿವಿಧ ವರ್ಗದ ಪರವಾನಗಿಗಳನ್ನು ಪಡೆಯುವಲ್ಲಿ ನಿಗದಿಪಡಿಸಿರುವ ಕಾನೂನು ನೀತಿ ನಿಯಮಗಳು ಯಾವುವು; | ರಾಜ್ಯದಲ್ಲಿ ಅಬಕಾರಿ ಪರವಾನಗಿಗಳನ್ನು ನೀಡುವಾಗ ಈ ಕೆಳಕಂಡ ನಿಯಮಗಳಡಿಯಲ್ಲಿನ ನಿಯಮಗಳನ್ನು ಪಾಲಿಸಿ ನೀಡಲಾಗುತ್ತಿದೆ. ಪ್ರಸ್ತುತ ಸರ್ಕಾರವು ನಿರ್ಬಂಧಿಸಿರುವ ಹಿನ್ನಲೆಯಲ್ಲಿ ಸಿಎಲ್-2 ಮತ್ತು ಸಿಎಲ್-9 ಸನ್ನದುಗಳನ್ನು ಹೊಸದಾಗಿ ಮಂಜೂರು ಮಾಡಲಾಗುತ್ತಿಲ್ಲ.<br>1) **ಸಿಎಲ್-4, ಸಿಎಲ್-6ಎ, ಸಿಎಲ್-7, ಸಿಎಲ್-8, ಸಿಎಲ್-8ಎ, ಸಿಎಲ್-8ಬಿ, ಸಿಎಲ್-11-ಸಿ, ಸಿಎಲ್-16, ಸಿಎಲ್-17, ಮತ್ತು ಸಿಎಲ್-18 ಸನ್ನದುಗಳು:-** ಕರ್ನಾಟಕ ಅಬಕಾರಿ (ದೇಶಿ ಮತ್ತು ವಿದೇಶಿ ಮದ್ಯ ಮಾರಾಟ) ನಿಯಮಗಳು, 1968 ರಡಿಯಲ್ಲಿನ ನಿಯಮಗಳಲ್ಲಿ ಅಗತ್ಯವಾಗಿ ಕಲ್ಪಿಸಬೇಕಾಗಿರುವ ಮೂಲಭೂತ ಸೌಲಭ್ಯಗಳು.<br>2) **ಸಿಎಲ್-4, ಸಿಎಲ್-6ಎ, ಸಿಎಲ್-7, ಸಿಎಲ್-9 ಸನ್ನದುಗಳಿಗೆ ಹೊಂದಿಕೊಂಡಿರುವ ಆರ್ ವಿಬಿ ಸನ್ನದುಗಳು:-** ಕರ್ನಾಟಕ ಅಬಕಾರಿ ಕಾಯಿದೆ 1965 ಮತ್ತು ಅದರಡಿ ರೂಪಿತವಾಗಿರುವ ಕರ್ನಾಟಕ ಅಬಕಾರಿ (ಚಿಲ್ಲರೆಯಾಗಿ ಬೀರ್ ನ್ನು ಮಾರಾಟ ಮಾಡುವ ಗುತ್ತಿಗೆ) ನಿಯಮ 1976 ರಡಿಯಲ್ಲಿನ ನಿಯಮಗಳು.<br>3) **ಮೈಕ್ರೋಬ್ರೀವರಿ ಸನ್ನದುಗಳು:-** ಕರ್ನಾಟಕ ಅಬಕಾರಿ ಕಾಯಿದೆ 1965 ಮತ್ತು ಅದರಡಿ ರೂಪಿತವಾಗಿರುವ ಕರ್ನಾಟಕ ಅಬಕಾರಿ (ಬ್ರೀವರಿ) (ತಿದ್ದುಪಡಿ) ನಿಯಮಗಳು 2010 ರಡಿಯಲ್ಲಿ ರೂಪಿತವಾಗಿರುವ ನಿಯಮಗಳು ಮತ್ತು ಅಗತ್ಯವಾಗಿ ಕಲ್ಪಿಸಬೇಕಾಗಿರುವ ಮೂಲಭೂತ ಸೌಲಭ್ಯಗಳು<br>4) **ವೈನ್ ಟಾವರಿನ್ / ವೈನ್ ಬೋಟಿಕ್ ಸನ್ನದುಗಳು:-** ಕರ್ನಾಟಕ ಅಬಕಾರಿ ಕಾಯಿದೆ 1965 ಮತ್ತು ಅದರಡಿ ರೂಪಿತವಾಗಿರುವ ಕರ್ನಾಟಕ ಅಬಕಾರಿ (ಚಿಲ್ಲರೆಯಾಗಿ ವೈನ್ ನ್ನು ಮಾರಾಟ ಮಾಡುವ ಹಕ್ಕು) ನಿಯಮಗಳು 2008 ರಡಿಯಲ್ಲಿನ ನಿಯಮಗಳು.<br>ಮುಂದುವರೆದು ಈ ಎಲ್ಲಾ ಸನ್ನದುಗಳನ್ನು ಮಂಜೂರು |

| | | |
|---|---|---|
| | | ಮಾಡುವಾಗ ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು, 1967ರಲ್ಲಿನ ನಿಯಮಗಳಡಿ ರೂಪಿಸಿರುವ ನಿರ್ಬಂಧಗಳನ್ನು ಪಾಲಿಸುವ ಜೊತೆಗೆ ಕರ್ನಾಟಕ ಅಬಕಾರಿ (ದೇಶಿ ಮತ್ತು ವಿದೇಶಿ ಮದ್ಯ ಮಾರಾಟ) ನಿಯಮಗಳು, 1968 ರ ನಿಯಮ 4 (ಬಿ) ಪ್ರಕಾರ ಮತ್ತು ಕರ್ನಾಟಕ ಅಬಕಾರಿ (ಬ್ರೀವರಿ) ನಿಯಮಗಳು 1967 ರ ನಿಯಮ 5 (ಬಿ) ರನ್ವಯ ಅನರ್ಹರಾಗದಿರುವ ಬಗ್ಗೆ ಸ್ವಯಂ ಘೋಷಿತ ಮುಚ್ಚಳಿಕೆಯನ್ನು ಪಡೆಯಲಾಗುತ್ತಿರುತ್ತದೆ. |
| ಆ) | ಸದರಿ ಪರಿವಾನಗಿಗಳನ್ನು ನೀಡಿದ ನಂತರ ಅವುಗಳ ದುರುಪಯೋಗ ಮತ್ತು ಸರ್ಕಾರದ ನೀತಿ ನಿಬಂಧನೆಗಳನ್ನು ಉಲ್ಲಂಘಿಸಿರುವವರ ಮೇಲೆ ಕಳೆದ ಎರಡು ವರ್ಷಗಳಲ್ಲಿ ಎಷ್ಟು ಪ್ರಕರಣಗಳು ದಾಖಲಾಗಿವೆ; ಅಂತಹವರ ಮೇಲೆ ಕೈಗೊಂಡ ಕಾನೂನು ಕ್ರಮಗಳೇನು; | ಮದ್ಯದ ಅಂಗಡಿಗಳು ವ್ಯವಹರಣೆಯ ಸಮಯದಲ್ಲಿ ಅಬಕಾರಿ ನಿಯಮಗಳ ಅಥವಾ ಸನ್ನದು ಷರತ್ತುಗಳ ಉಲ್ಲಂಘನೆ ವಿರುದ್ಧ ಕಾನೂನು ರೀತ್ಯಾ ಕ್ರಮ ಕೈಗೊಂಡು ಪ್ರಕರಣಗಳನ್ನು ದಾಖಲು ಮಾಡಲಾಗುತ್ತಿದೆ. 2019-20 (ಜುಲೈಯಿಂದ ಜೂನ್ ವರೆಗೆ) ಮತ್ತು 2020-21 (ಜುಲೈಯಿಂದ ಫೆಬ್ರವರಿವರೆಗೆ) ಅಬಕಾರಿ ಸಾಲುಗಳಲ್ಲಿ ಕ್ರಮವಾಗಿ 10832 ಮತ್ತು 7938 ಪ್ರಕರಣಗಳನ್ನು ದಾಖಲು ಮಾಡಲಾಗಿದೆ. ದಾಖಲಾದ ಮೊಕದ್ದಮೆಗಳಲ್ಲಿ ದಂಡ ವಿಧಿಸಿ ಇತ್ಯರ್ಥಪಡಿಸಲಾಗುತ್ತಿದೆ. |
| ಇ) | ಕಳೆದ 02 ವರ್ಷಗಳಲ್ಲಿ ಅಬಕಾರಿ ಇಲಾಖೆಯ ಕುರಿತು ಆಯವ್ಯಯ ಕುರಿತು ವಿವರಗಳೇನು? | ಕಳೆದ 02 ವರ್ಷಗಳಲ್ಲಿ ಅಬಕಾರಿ ಇಲಾಖೆಗೆ ಒದಗಿಸಲಾದ ಅನುದಾನ, ಮಾಡಿರುವ ವೆಚ್ಚ, ನಿಗದಿಪಡಿಸಿದ ಮತ್ತು ಸಾಧಿಸಲಾದ ಗುರಿಯ ವಿವರಗಳು ಕೆಳಗಿನಂತಿದೆ: |

ರೂ.ಲಕ್ಷಗಳಲ್ಲಿ

| | 2018-19 | | 2019-20 | |
|---|---|---|---|---|
| ಒದಗಿಸಿದ ಅನುದಾನ ಮತ್ತು ವೆಚ್ಚದ ವಿವರ | | | | |
| | ಒದಗಿಸಿದ ಅನುದಾನ | ವೆಚ್ಚ | ಒದಗಿಸಿದ ಅನುದಾನ | ವೆಚ್ಚ |
| ವೇತನ | 11811.00 | 13412.96 | 14841.38 | 14997.33 |
| ವೇತನೇತರ | 5178.00 | 3884.86 | 5738.01 | 5022.11 |
| ರಾಜಸ್ವದ ಗುರಿ ಮತ್ತು ಸಾಧನೆಯ ವಿವರ | | | | |
| | ಗುರಿ | ಸಾಧನೆ | ಗುರಿ | ಸಾಧನೆ |
| ರಾಜಸ್ವ | 19,75,000.00 | 17,41656.28 | 20,95,000.00 | 21,58,395.21 |

ಆಇ 51 ಇಎಲ್‌ಕ್ಯೂ 2021

(ಸಹಿ)

(ಕೆ. ಗೋಪಾಲಯ್ಯ)
ಅಬಕಾರಿ ಸಚಿವರು

## ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3408 |
| ಮಾನ್ಯ ಸದಸ್ಯರ ಹೆಸರು | ಶ್ರೀ ಬಸನಗೌಡ ಆರ್ ಪಾಟೀಲ್ (ಯತ್ನಾಳ್) (ವಿಜಯಪುರ ನಗರ) |
| ಉತ್ತರಿಸಬೇಕಾದ ದಿನಾಂಕ | 23-03-2021 |
| ಉತ್ತರಿಸಬೇಕಾದವರು | ಅಬಕಾರಿ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಅಬಕಾರಿ ಇಲಾಖೆಯ ಅಧಿಕಾರಿಗಳಿಗೆ ಒಟ್ಟು ಎಷ್ಟು ವಾಹನ ಒದಗಿಸಲಾಗಿದೆ; ಅಗತ್ಯ ವಾಹನ ಸೌಲಭ್ಯವಿಲ್ಲದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಅಗತ್ಯವಿರುವಷ್ಟು ವಾಹನ ಕಲ್ಪಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ರಾಜ್ಯದಲ್ಲಿ ಅಬಕಾರಿ ಇಲಾಖೆಯ ಅಧಿಕಾರಿಗಳಿಗೆ ಒದಗಿಸಲಾಗಿರುವ ಒಟ್ಟು ವಾಹನಗಳ ಸಂಖ್ಯೆ 538.<br>ಅಗತ್ಯ ವಾಹನ ಸೌಲಭ್ಯವಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆ.<br>ಅಗತ್ಯವಿರುವಷ್ಟು ವಾಹನ ಕಲ್ಪಿಸಲು ಸರ್ಕಾರವು 2019-20ನೇ ಸಾಲಿನಲ್ಲಿ 94 ವಾಹನಗಳನ್ನು ಖರೀದಿಸಿದ್ದು, 2020-21ನೇ ಸಾಲಿನಲ್ಲಿ 77 ಹೊಸ ವಾಹನಗಳನ್ನು ಖರೀದಿಸಲು ಕ್ರಮ ಕೈಗೊಂಡಿದೆ. |
| ಆ) | ಪೊಲೀಸ್ ಇಲಾಖೆಗೆ ಹೋಲಿಸಿದಲ್ಲಿ ಅಬಕಾರಿ ಇಲಾಖೆಯ ಅಧಿಕಾರಿ ಮತ್ತು ಸಿಬ್ಬಂದಿಗಳಿಗೆ ವೇತನದಲ್ಲಿ ವ್ಯತ್ಯಾಸವಿರುವುದು ನಿಜವೇ; ಈ ತಾರತಮ್ಯ ಸರಿಪಡಿಸಲು ಕೈಗೊಂಡಿರುವ ಕ್ರಮಗಳೇನು; | ಹೌದು.<br>ಅಬಕಾರಿ ಇಲಾಖೆಯ ಕೆಲವೊಂದು ವೃಂದದ ಹುದ್ದೆಗಳ ವೇತನ ಶ್ರೇಣಿಗಳನ್ನು ಮೇಲ್ದರ್ಜೆಗೇರಿಸುವ ವೇತನ ಆಯೋಗದ 2ನೇ ಸಂಪುಟದಲ್ಲಿನ ವರದಿಯ ಪರಿಶೀಲನೆಯನ್ನು ಅಧಿಕಾರಿ ಸಮಿತಿಗೆ ವಹಿಸಲಾಗಿರುತ್ತದೆ. ಪ್ರಸ್ತುತ ಅಧಿಕಾರಿ ಸಮಿತಿಯ ವರದಿಯು ಅಂತಿಮ ಹಂತದಲ್ಲಿದ್ದು, ವರದಿಯನ್ನು ನಿರೀಕ್ಷಿಸಿದೆ. |
| ಇ) | ಅಬಕಾರಿ ಇಲಾಖೆಯ ಕಛೇರಿಗಳಿಗೆ ಸ್ವಂತ ಕಟ್ಟಡ ಕಲ್ಪಿಸಲು ಯಾವ ಕ್ರಮ ಕೈಗೊಳ್ಳಲಾಗಿದೆ; ಇದಕ್ಕಾಗಿ ಕಳೆದ 3 ವರ್ಷಗಳಿಂದ ಮಂಜೂರು ಮಾಡಿರುವ/ಬಿಡುಗಡೆ ಮಾಡಿರುವ ಮತ್ತು ವೆಚ್ಚ ಮಾಡಿರುವ ಹಣ ಎಷ್ಟು; | ಅಬಕಾರಿ ಇಲಾಖೆಯ ಕಛೇರಿಗಳಿಗೆ ಸ್ವಂತ ಕಟ್ಟಡ ಕಲ್ಪಿಸಲು ಅಬಕಾರಿ ಆಯುಕ್ತರು ಹಾಗೂ ಅಬಕಾರಿ ಉಪ ಆಯುಕ್ತರ ಹಂತದಲ್ಲಿ ಕಂದಾಯ ಇಲಾಖೆಗೆ/ನಗರ ಸ್ಥಳೀಯ ಸಂಸ್ಥೆಗಳಿಗೆ ನಿವೇಶನ ಹಂಚಿಕೆ ಮಾಡಲು ಕೋರಿಕೆಯನ್ನು ಸಲ್ಲಿಸಿ ನಿವೇಶನ ಪಡೆಯಲು ಕ್ರಮ ವಹಿಸಲಾಗುತ್ತಿದೆ. |

<table>
<tr><td></td><td>(ವರ್ಷವಾರು ವಿವರ ನೀಡುವುದು)</td><td>ಕಳೆದ ಮೂರು ವರ್ಷಗಳಲ್ಲಿ ಇಲಾಖೆಗೆ ಸ್ವಂತ ಕಟ್ಟಡ ಹೊಂದಲು ಮಂಜೂರು/ಬಿಡುಗಡೆ ಮಾಡಿರುವ ಅನುದಾನದ ವಿವರ ಕೆಳಕಂಡಂತಿದೆ:<br>ರೂ.ಲಕ್ಷಗಳಲ್ಲಿ
<table>
<tr><th colspan="3">ನಿವೇಶನ ಹೊಂದಲು/ ಸ್ವಂತ ಕಟ್ಟಡ ಹೊಂದಲು ಮಂಜೂರು/ಬಿಡುಗಡೆ ಮಾಡಿರುವ ಹಣ</th><th colspan="3">ನಿವೇಶನ ಹೊಂದಲು/ ಸ್ವಂತ ಕಟ್ಟಡ ಹೊಂದಲು ವೆಚ್ಚ ಮಾಡಿರುವ ಹಣ</th></tr>
<tr><th>2018-19</th><th>2019-20</th><th>2020-21</th><th>2018-19</th><th>2019-20</th><th>2020-21</th></tr>
<tr><td>–</td><td>–</td><td>12.98</td><td>90.00</td><td>–</td><td>332.00</td></tr>
</table></td></tr>
<tr><td>ಈ)</td><td>ಈ ಇಲಾಖೆಯ ಸಿಬ್ಬಂದಿಗಳಿಗೆ ಆರೋಗ್ಯ ಭಾಗ್ಯ ಯೋಜನೆ ಕಲ್ಪಿಸುವ ಅವಶ್ಯಕತೆ ಇದ್ದು, ಈ ಕುರಿತು ಸರ್ಕಾರದ ನಿಲುವೇನು?</td><td>ಅಬಕಾರಿ ಇಲಾಖೆಯ ಸಿಬ್ಬಂದಿಗಳಿಗೆ ಆರೋಗ್ಯ ಭಾಗ್ಯ ಯೋಜನೆ ಕಲ್ಪಿಸುವ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿಲ್ಲ.</td></tr>
</table>

ಆಇ 47 ಇಎಲ್‌ಕ್ಯೂ 2021

(ಕೆ. ಗೋಪಾಲಯ್ಯ)
ಅಬಕಾರಿ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3432 |
| ಸದಸ್ಯರ ಹೆಸರು | : | ಶ್ರೀ ರಘುಪತಿ ಭಟ್ ಕೆ. (ಉಡುಪಿ) |
| ಉತ್ತರಿಸಬೇಕಾದ ದಿನಾಂಕ | : | 23.03.2021 |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |

*******

| | ಪ್ರಶ್ನೆ | ಉತ್ತರ |
|---|---|---|
| ಅ) | ಗ್ರಾಮೀಣ ಭಾಗಗಳಲ್ಲಿ ಅಧಿಕ ಸಾಮರ್ಥ್ಯವಿರುವ ಅಥವಾ ಹೆಚ್ಚುವರಿ ಪರಿವರ್ತಕ (ಟ್ರಾನ್ಸ್ ಫಾರ್ಮರ್) ಗಳನ್ನು ಅಳವಡಿಸದೇ ಇರುವುದರಿಂದ ಒತ್ತಡ ಹೆಚ್ಚಾಗಿ ವಿದ್ಯುತ್ ಸಂಪರ್ಕದಲ್ಲಿ ವ್ಯತ್ಯಯವಾಗಿ ಪದೇ ಪದೇ ವಿದ್ಯುತ್ ಕಡಿತಗೊಂಡು ಸಮಸ್ಯೆ ಆಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಗ್ರಾಮೀಣ ಭಾಗದ ರೈತರ ಪಂಪ್‌ಸೆಟ್‌ಗಳಿಗೆ ಮಂಜೂರಾದ ವಿದ್ಯುತ್ ಭಾರಕ್ಕೆ ತಕ್ಕಂತೆ ಪರಿವರ್ತಕಗಳನ್ನು ಅಳವಡಿಸಲಾಗುತ್ತದೆ. ಆದರೆ ರೈತರು ಅಧಿಕ ಸಾಮರ್ಥ್ಯದ ಮೋಟಾರ್ ಪಂಪ್‌ಸೆಟ್‌ಗಳನ್ನು ಅಳವಡಿಸುವುದರಿಂದ ಹಾಗೂ ರೈತರು ನಿಗಮದ ಗಮನಕ್ಕೆ ತರದೆ ಪಂಪ್‌ಸೆಟ್‌ಗಳಿಗೆ ಅನಧಿಕೃತವಾಗಿ ವಿದ್ಯುತ್ ಸಂಪರ್ಕ ಪಡೆಯುವುದರಿಂದ ಪರಿವರ್ತಕಗಳ ಭಾರವು ಹೆಚ್ಚಾಗಿರುತ್ತದೆ.<br><br>ಗ್ರಾಮೀಣ ಭಾಗಗಳಲ್ಲಿ ಹಾಲಿ ಇರುವ ಪರಿವರ್ತಕಗಳ ಮೇಲೆ ಅಧಿಕ ಹೊರೆ ಇದ್ದಲ್ಲಿ ಬಂಡವಾಳ ವೆಚ್ಚ (CAPEX) ಕಾಮಗಾರಿಯಡಿಯಲ್ಲಿ ಅಧಿಕ ಸಾಮರ್ಥ್ಯದ ಪರಿವರ್ತಕ ಅಥವಾ ಹೆಚ್ಚುವರಿ ಪರಿವರ್ತಕಗಳನ್ನು ಅಳವಡಿಸಲಾಗುತ್ತಿದೆ.<br><br>ಹಾಲಿ ಇರುವ ಪರಿವರ್ತಕಗಳು ವಿಫಲವಾದ ಸಮಯದಲ್ಲಿ ಅವುಗಳನ್ನು ಬದಲಾಯಿಸುವ ತನಕ ಪರ್ಯಾಯ ಪೂರೈಕೆಯಿಂದ ವಿದ್ಯುತ್ ಸರಬರಾಜು ವ್ಯವಸ್ಥೆ ಮಾಡಲಾಗುತ್ತಿದೆ. ಒತ್ತಡ ಹೆಚ್ಚಾಗಿ ವಿದ್ಯುತ್ ಸಂಪರ್ಕದಲ್ಲಿ ವ್ಯತ್ಯಯವಾಗದಂತೆ ಕ್ರಮ ಕೈಗೊಳ್ಳಲಾಗುತ್ತಿದೆ. |
| ಆ) | ಕೃಷಿ ಕಾರ್ಯಕ್ಕೆ ಪಂಪುಗಳನ್ನು ಬಳಸುವುದರಿಂದ ಅಧಿಕ ವಿದ್ಯುತ್ತಿನ ಪ್ರಸರಣ ಆಗುವುದರಿಂದ ಹೆಚ್ಚಿನ ಸಾಮರ್ಥ್ಯವಿರುವ ಟ್ರಾನ್ಸ್ ಫಾರ್ಮರ್‌ಗಳನ್ನು ಅಳವಡಿಸುವಲ್ಲಿ ಇಲಾಖೆಯ ನಿಲುವೇನು; | ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಕೃಷಿ ಕಾಯಕಕ್ಕೆ ಸಂಬಂಧಿಸಿದಂತೆ, ವಿವಿಧ ಯೋಜನೆಗಳಾದ ಗಂಗಾಕಲ್ಯಾಣ, ಅನಧಿಕೃತ ನೀರಾವರಿ ಪಂಪ್‌ಸೆಟ್‌ಗಳು, ಹೆಚ್.ವಿ.ಡಿ.ಎಸ್., ಸಾಮಾನ್ಯ ನೀರಾವರಿ ಪಂಪ್‌ಸೆಟ್‌ಗಳ ಅಡಿ ಪರಿವರ್ತಕಗಳನ್ನು ಅಳವಡಿಸಲಾಗುತ್ತಿದೆ. ಅಧಿಕ ಹೊರೆ ಇದ್ದಲ್ಲಿ, ಅಧಿಕ ಸಾಮರ್ಥ್ಯದ ಪರಿವರ್ತಕ ಅಥವಾ ಹೆಚ್ಚುವರಿ ಪರಿವರ್ತಕಗಳನ್ನು ಅಳವಡಿಸಲಾಗುತ್ತಿದೆ.<br><br>2020-21ನೇ ಸಾಲಿನಲ್ಲಿ ಫೆಬ್ರವರಿ-2021 ರ ವರೆಗೆ ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಗ್ರಾಮೀಣ ಭಾಗಗಳಲ್ಲಿರುವ ಪರಿವರ್ತಕಗಳ ಮೇಲಿರುವ ಒತ್ತಡವನ್ನು ಕಡಿಮೆ ಮಾಡಲು ವಿವಿಧ ಯೋಜನೆಗಳಡಿ ಪರಿವರ್ತಕಗಳನ್ನು ಅಳವಡಿಸಲಾಗಿದ್ದು, ವಿದ್ಯುತ್ ಸರಬರಾಜು ಕಂಪನಿವಾರು ವಿವರಗಳು ಕೆಳಗಿನಂತಿವೆ. |

| | | |
|---|---|---|
| | | <table><tr><th>ವಿದ್ಯುತ್ ಸರಬರಾಜು ಕಂಪನಿ</th><th>ಅಳವಡಿಸಲಾಗಿರುವ ಪರಿವರ್ತಕಗಳ ಸಂಖ್ಯೆ</th></tr><tr><td>ಬೆಸ್ಕಾಂ</td><td>26435</td></tr><tr><td>ಮೆಸ್ಕಾಂ</td><td>4,673</td></tr><tr><td>ಸೆಸ್ಕ್</td><td>14,566</td></tr><tr><td>ಹೆಸ್ಕಾಂ</td><td>5,852</td></tr><tr><td>ಜೆಸ್ಕಾಂ</td><td>4,286</td></tr><tr><td>ಒಟ್ಟು</td><td>55,812</td></tr></table> |
| ಇ) | ಈ ಕುರಿತು ಗ್ರಾಮೀಣ ಭಾಗಗಳಲ್ಲಿ ಸರ್ವೇ ನಡೆಸಿ ಅವಶ್ಯಕತೆ ಇರುವ ಭಾಗಗಳಲ್ಲಿ ಅಧಿಕ ಸಾಮರ್ಥ್ಯವಿರುವ ಟ್ರಾನ್ಸ್ ಫಾರ್ಮರ್‌ಗಳನ್ನು ಅಳವಡಿಸುವಲ್ಲಿ ಇರುವ ತೊಡಕುಗಳೇನು? | ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ, ನಿಯಮಾನುಸಾರ ಅಧಿಕ ವಿದ್ಯುತ್ ಭಾರ ಹೊಂದಿರುವ ಪರಿವರ್ತಕಗಳ ಸ್ಥಳ ಪರಿಶೀಲನೆ ನಡೆಸಿ ಅಂದಾಜು ಪಟ್ಟಿಗಳನ್ನು ಕಾಲಕಾಲಕ್ಕೆ ತಯಾರಿಸಿ ಅಧಿಕ ಸಾಮರ್ಥ್ಯದ ಪರಿವರ್ತಕ ಅಥವಾ ಹೆಚ್ಚುವರಿ ಪರಿವರ್ತಕಗಳನ್ನು ಅಳವಡಿಸಲಾಗುತ್ತಿದೆ. |

**ಸಂಖ್ಯೆ: ಎನರ್ಜಿ 119 ಪಿಪಿಎಂ 2021**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

1 .ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3440

2. ಸದಸ್ಯರ ಹೆಸರು : ಶ್ರೀ ಕೃಷ್ಣಾರೆಡ್ಡಿ ಎಂ. (ಚಿಂತಾಮಣಿ)

3. ಉತ್ತರಿಸಬೇಕಾದ ದಿನಾಂಕ: : 23-03-2021

4. ಉತ್ತರಿಸುವವರು: : ಮಾನ್ಯ ಮುಖ್ಯಮಂತ್ರಿಯವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ನ್ಯಾಷನಲ್ ಹಾನರ್ ಆಕ್ಟ್ 50 ಹಾಗೂ 71ರನ್ವಯ, ಕರ್ನಾಟಕ ಸರ್ಕಾರದ ಆಡಳಿತದ ವ್ಯವಸ್ಥೆಯಲ್ಲಿ ನಾನಾ ವಿಕೃತ ಲಾಂಛನಗಳ ಬಳಕೆ ಮಾಡುವುದು ಅಪರಾಧವಲ್ಲವೇ; ಈ ಅವ್ಯವಸ್ಥೆಯನ್ನರಿತ ಸಮಾಜ ವಿಜ್ಞಾನಿ ಶ್ರೀ ರವೀಂದ್ರನಾಥ ರವರು, ಪರ್ಯಾಯವಾಗಿ ಸಮಾಜ ವಿಜ್ಞಾನದಡಿ ಲಾಂಛನವನ್ನು ಮರುರಚಿಸಿ, 2002ರಲ್ಲಿ ಸರ್ಕಾರಕ್ಕೆ ನೀಡಿದ ಶ್ರಮಕ್ಕೆ ಪ್ರತಿಯಾಗಿ ಸರ್ಕಾರ ಗೌರವಧನವನ್ನು ಪಾವತಿಸಿದೆಯೇ; ಒಂದು ವೇಳೆ ಪಾವತಿಸದಿದ್ದಲ್ಲಿ ಯಾವ ಕಾಲಮಿತಿಯೊಳಗೆ ಗೌರವಧನವನ್ನು ಪಾವತಿಸಲಾಗುವುದು(ವಿವರ ನೀಡುವುದು). | ರಾಜ್ಯ ಸರ್ಕಾರವು ಆಡಳಿತ ವ್ಯವಸ್ಥೆಯಲ್ಲಿದಿನಾಂಕ:05.10.1950 ರಲ್ಲಿಲಾಂಛನವನ್ನುಅಳವಡಿಸಿಕೊಂಡಿದೆ.<br><br>ಶ್ರೀ ರವೀಂದ್ರನಾಥ್,ಸಮಾಜ ವಿಜ್ಞಾನಿ, ರವರು ರಾಜ್ಯ ಲಾಂಛನದ ಆಪಬಳಕೆ ತಡೆ ಕುರಿತಂತೆ ಮಾತ್ರ ಸಲಹೆ/ಸೂಚನೆಗಳನ್ನು ನೀಡಿದ್ದು, ಹೊಸದಾಗಿ ಲಾಂಛನವನ್ನು ರೂಪಿಸಿರುವುದಿಲ್ಲ. ಆದ್ದರಿಂದ, ಇವರಿಗೆ ಯಾವುದೇ ಗೌರವಧನ ನೀಡುವ ಪ್ರಶ್ನೆ ಉದ್ಭವಿಸುವುದಿಲ್ಲ. |
| ಆ) | ಸಮಾಜ ವಿಜ್ಞಾನಿ ಶ್ರೀ ರವೀಂದ್ರನಾಥ್ ರವರಿಗೆ ಸರ್ಕಾರದ ಘನತೆಗೆ ತಕ್ಕ ಗೌರವಧನವನ್ನು ಇದುವರೆವಿಗೂ ಪಾವತಿಸಲು ವಿಳಂಬ ಮಾಡಿರುವ ಅಧಿಕಾರಿ/ನೌಕರರ ಮೇಲೆ ಶಿಸ್ತು ಕ್ರಮ | "ಅ" ರಲ್ಲಿನ ಉತ್ತರದಂತೆ ಉದ್ಭವಿಸುವುದಿಲ್ಲ |

| | | |
|---|---|---|
| | ಕೈಗೊಳ್ಳಲಾಗುವುದೆ; (ವಿವರ ನೀಡುವುದು) | |
| ಇ) | ಕರ್ನಾಟಕ ಸರ್ಕಾರದ ಆಡಳಿತದಲ್ಲಿ ರಾಜ್ಯ ಶಿಷ್ಟಾಚಾರದನ್ವಯ ಇಲಾಖಾವಾರು ಶಾಸನಬದ್ಧ ಲಾಂಛನ ಬಳಕೆಯಲ್ಲಿದೆಯೇ; ಒಂದು ವೇಳೆ ಬಳಕೆಯಲ್ಲಿ ಇಲ್ಲದಿದ್ದರೆ ಯಾವ ಕಾರಣಕ್ಕಾಗಿ ಶಾಸನಬದ್ಧ ಲಾಂಛನ ಬಳಕೆಯಲ್ಲಿರುವುದಿಲ್ಲ; ಈ ಬಗ್ಗೆ ತೆಗೆದುಕೊಂಡ ಕ್ರಮವೇನು? (ವಿವರ ನೀಡುವುದು) | ಕರ್ನಾಟಕ ರಾಜ್ಯ ಸರ್ಕಾರದ ಆಡಳಿತದಲ್ಲಿ ಶಿಷ್ಟಾಚಾರದನ್ವಯ ಶಾಸನಬದ್ಧ ಲಾಂಛನ ಬಳಕೆಯಲ್ಲಿರುತ್ತದೆ. |

ಸಿಆಸುಇ 80 ರಾಸ 2021

[ಬಿ.ಎಸ್. ಯಡಿಯೂರಪ್ಪ]
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3443 |
| ಸದಸ್ಯರ ಹೆಸರು | : | ಶ್ರೀ ಹೂಲಗೇರಿ ಡಿ.ಎಸ್.(ಲಿಂಗಸುಗೂರು) |
| ಉತ್ತರಿಸಬೇಕಾದ ದಿನಾಂಕ | : | 23.03.2021 |
| ಉತ್ತರಿಸುವ ಸಚಿವರು | : | ಮಾನ್ಯ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಯಚೂರು ಜಿಲ್ಲೆಯ ಲಿಂಗಸಗೂರು ವಿಧಾನಸಭಾ ಕ್ಷೇತ್ರಕ್ಕೆ ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ ವತಿಯಿಂದ **2018-19** ರಿಂದ **2020-21ನೇ** ಸಾಲಿನವರೆಗೂ ಮಂಜೂರಾಗಿರುವ ಕಾಮಗಾರಿಗಳು ಎಷ್ಟು; | ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯಡಿ ತಾಲ್ಲೂಕವನ್ನು ಒಂದು ಘಟಕವನ್ನಾಗಿ ಪರಿಗಣಿಸಿ ಮೈಕ್ರೋ ಯೋಜನೆಯಡಿ ತಾಲ್ಲೂಕುವಾರು ಅನುದಾನವನ್ನು ಹಂಚಿಕೆ ಹಾಗೂ ಮ್ಯಾಕ್ರೋ ಯೋಜನೆಯಡಿಯಲ್ಲಿ ಜಿಲ್ಲಾವಾರು ಅನುದಾನ ಹಂಚಿಕೆ ಮಾಡಲಾಗುತ್ತಿದೆ.<br>ರಾಯಚೂರು ಜಿಲ್ಲೆಯ ಲಿಂಗಸಗೂರು ತಾಲ್ಲೂಕಿನಲ್ಲಿ ಕೆಳಕಂಡಂತೆ ಈ ಕೆಳಗಿನಂತೆ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ. |

| ತಾಲ್ಲೂಕು | ವರ್ಷ | ಒಟ್ಟು ಕಾಮಗಾರಿಗಳ ಸಂಖ್ಯೆ |
|---|---|---|
| ಲಿಂಗಸಗೂರು | 2018-19 | 136 |
| | 2019-20 | 130 |
| | 2020-21 | 51 |
| | **ಒಟ್ಟು** | **317** |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಆ) | ಮಂಜೂರಾಗಿರುವ ಕಾಮಗಾರಿಗಳಿಗೆ ಬಿಡುಗಡೆಯಾಗಿರುವ ಅನುದಾನ ಎಷ್ಟು; ಪೂರ್ಣಗೊಂಡಿರುವ ಕಾಮಗಾರಿಗಳು ಎಷ್ಟು; (ವಿವರ ನೀಡುವುದು) | ಮಂಜೂರಾಗಿರುವ ಕಾಮಗಾರಿಗಳಿಗೆ ಬಿಡುಗಡೆಯಾಗಿರುವ ಹಾಗೂ ಪೂರ್ಣಗೊಂಡಿರುವ ಕಾಮಗಾರಿಗಳ ವಿವರ ಈ ಕೆಳಕಂಡಂತೆ ಇದೆ. |

| ತಾಲ್ಲೂಕು | ವರ್ಷ | ಒಟ್ಟು ಕಾಮಗಾರಿಗಳ ಸಂಖ್ಯೆ | ಪೂರ್ಣಗೊಂಡ ಕಾಮಗಾರಿಗಳ ಸಂಖ್ಯೆ |
|---|---|---|---|
| ಲಿಂಗಸಗೂರು | 2018-19 | 136 | 113 |
| | 2019-20 | 130 | 69 |
| | 2020-21 | 51 | 0.00 |
| | **ಒಟ್ಟು** | **317** | **182** |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಇ) | ಕಲ್ಯಾಣ-ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ ವತಿಯಿಂದ ಜಾರಿಗೊಳಿಸಿರುವ ಕಾಮಗಾರಿಗಳು ಮಂದಗತಿಯಲ್ಲಿ ಸಾಗುತ್ತಿರುವುದು ಸರ್ಕಾರದ | -ಇಲ್ಲ-<br>ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯಿಂದ ಕೈಗೊಂಡಿರುವ ಕಾಮಗಾರಿಗಳು 2020-21ನೇ ಸಾಲಿನಲ್ಲಿ ಅನುಮೋದಿತ 5422 |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| | ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ ಈ ಬಗ್ಗೆ ಸರ್ಕಾರ ತೆಗೆದುಕೊಂಡ ಕ್ರಮಗಳೇನು? | ಕಾಮಗಾರಿಗಳ ಪೈಕಿ 3966 ಕಾಮಗಾರಿಗಳು ಪೂರ್ಣಗೊಂಡಿದ್ದು ರೂ.1131.86 ಕೋಟಿಗಳಲ್ಲಿ ಫೆಬ್ರವರಿ–2021ರ ಅಂತ್ಯಕ್ಕೆ ರೂ. 826.16 ಕೋಟಿಗಳು ವೆಚ್ಚಮಾಡಲಾಗಿದೆ.<br>ಕಾಮಗಾರಿಗಳನ್ನು ನಿಗದಿತ ಕಾಲಾವದಿಯಲ್ಲಿ ಪೂರ್ಣಗೊಳಿಸಲು ರೂ.10.00 ಕೋಟಿಗಳವರೆಗೆ ಅನುಮೋದನೆ ನೀಡುವ ಅಧಿಕಾರವನ್ನು ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾಗಿದೆ ಹಾಗೂ ಪ್ರತಿ ಮಾಹೆ ಮುಖ್ಯಕಾರ್ಯದರ್ಶಿಗಳು ಮತ್ತು ಅಪರ ಮುಖ್ಯಕಾರ್ಯದರ್ಶಿಗಳು ಪ್ರಗತಿ ಪರಿಶೀಲನೆ ನಡೆಸಿ ಪ್ರಗತಿಯ ವೇಗವನ್ನು ಹೆಚ್ಚಿಸಲು ಕ್ರಮವಹಿಸಲಾಗಿದೆ. |

**ಪಿಡಿಎಸ್ 31 ಹೆಚ್‌ಕೆಡಿ 2021**

(ಡಾ॥ ನಾರಾಯಣಗೌಡ)
ಸಚಿವರು,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

# ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 3469 |
| 2 | ಸದಸ್ಯರ ಹೆಸರು | : | ಶ್ರೀ ರೇವಣ್ಣ ಹೆಚ್.ಡಿ (ಹೊಳೇನರಸೀಪುರ) |
| 3 | ಉತ್ತರಿಸುವ ದಿನಾಂಕ | : | 23.03.2021 |
| 4 | ಉತ್ತರಿಸುವ ಸಚಿವರು | : | ಮಾನ್ಯ ಯೋಜನಾ ಸಚಿವರು, ಯೋಜನೆ,ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ |

******

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ವಿಧಾನಸಭಾ ಸದಸ್ಯರ ಸ್ಥಳೀಯಾಭಿವೃದ್ಧಿ ಯೋಜನೆಯಡಿಯಲ್ಲಿ 2018-19ನೇ ಸಾಲಿನಲ್ಲಿ ರೂ.39.38 ಲಕ್ಷಗಳು ಹಾಗೂ 2019-20ನೇ ಸಾಲಿನಲ್ಲಿ ರೂ.139.00 ಲಕ್ಷಗಳ ಅನುದಾನ ಬಿಡುಗಡೆ ಬಾಕಿ ಇರುವುದು ನಿಜವೇ; (ಸಂಪೂರ್ಣ ಮಾಹಿತಿ ನೀಡುವುದು) | ರಾಜ್ಯದಲ್ಲಿ ವಿಧಾನಸಭಾ ಸದಸ್ಯರ ಸ್ಥಳೀಯಾಭಿವೃದ್ಧಿ ಯೋಜನೆಯಡಿಯಲ್ಲಿ 2018-19ನೇ ಸಾಲಿನಲ್ಲಿ ಹೊಳೇನರಸೀಪುರ ವಿಧಾನ ಸಭಾ ಕ್ಷೇತ್ರಕ್ಕೆ ರೂ.39.38 ಲಕ್ಷಗಳು ಬಿಡುಗಡೆಗೆ ಬಾಕಿಯಿರುವುದು ನಿಜ.<br><br>ಹಾಗೂ<br><br>2019-20ನೇ ಸಾಲಿನಲ್ಲಿ ಮೊದಲನೇ ಕಂತಿನ ಅನುದಾನವಾಗಿ ರೂ.50.00 ಲಕ್ಷಗಳನ್ನು ಹಾಗೂ ಎರಡನೇ ಕಂತಿನ ಅನುದಾನದಲ್ಲಿ ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪಯೋಜನೆಯಡಿ ಒಟ್ಟಾರೆಯಾಗಿ ರೂ.11.52 ಲಕ್ಷಗಳನ್ನು ಒಳಗೊಂಡಂತೆ ಒಟ್ಟು ರೂ. 61.52 ಲಕ್ಷಗಳನ್ನು ಬಿಡುಗಡೆಗೊಳಿಸಲಾಗಿರುತ್ತದೆ. ಬಾಕಿ ಕಂತಿನ ಅನುದಾನ ರೂ.138.48 ಲಕ್ಷಗಳ ಅನುದಾನ ಬಿಡುಗಡೆಯಾಗಿರುವುದಿಲ್ಲ.<br><br>2018-19ನೇ ಸಾಲಿನಲ್ಲಿ ಜಿಲ್ಲಾಧಿಕಾರಿಗಳ ಪಿಡಿ ಖಾತೆಯಲ್ಲಿ ರೂ.948.97 ಕೋಟಿಗಳ ಅನುದಾನ ಉಳಿದಿದ್ದ ಕಾರಣ ಸದರಿ ಸಾಲಿನಲ್ಲಿ 4ನೇ ಕಂತಿನ ಅನುದಾನ ರೂ.39.38 ಲಕ್ಷಗಳು ಬಿಡುಗಡೆ ಮಾಡಿರುವುದಿಲ್ಲ.<br><br>2019-20ನೇ ಸಾಲಿನಲ್ಲಿ ರೂ.672.55 ಕೋಟಿಗಳು ಜಿಲ್ಲಾಧಿಕಾರಿಗಳ ಪಿಡಿ ಖಾತೆಯಲ್ಲಿದ್ದು, ಶೇ.75 ರಷ್ಟು ವೆಚ್ಚ ಭರಿಸಿಲ್ಲವಾದ ಕಾರಣ ಮೂರು ಮತ್ತು ನಾಲ್ಕನೇ ಕಂತಿನ ಅನುದಾನ ಬಿಡುಗಡೆಯಾಗಿರುವುದಿಲ್ಲ.<br><br>ಆದರೆ, ದಿನಾಂಕ:23.06.2020 ರಂದು ಮಾನ್ಯ ಮುಖ್ಯ ಕಾರ್ಯದರ್ಶಿಗಳ ಪತ್ರದಲ್ಲಿ ಜಿಲ್ಲಾಧಿಕಾರಿಗಳು ಪಿಡಿ. ಖಾತೆಯಲ್ಲಿ ಲಭ್ಯವಿರುವ ಹಣದಿಂದ 2019-20ನೇ ಸಾಲಿನಲ್ಲಿ ಪ್ರತಿ ಶಾಸಕರಿಗೆ ರೂ.2.00 ಕೋಟಿಯಂತೆ ಅನುದಾನ ಪರಿಗಣಿಸಿ, ಕಾಮಗಾರಿಗಳಿಗೆ ಅನುಮೋದನೆ ನೀಡಲು ಸೂಚಿಸಲಾಗಿದೆ. |

...2

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಆ) | 2018-19 ಮತ್ತು 2019-20ನೇ ಸಾಲಿನಲ್ಲಿ ಈ ಯೋಜನೆಯಡಿಯಲ್ಲಿ ಕ್ರಿಯಾಯೋಜನೆಯನ್ನು ಸಲ್ಲಿಸಿದ್ದು, ಜಿಲ್ಲಾಧಿಕಾರಿಗಳು ಆಡಳಿತಾತ್ಮಕ ಅನುಮೋದನೆ ನೀಡಿದ ನಂತರ ಕಾಮಗಾರಿಗಳು ಸಂಪೂರ್ಣವಾಗಿ ಮುಗಿದರೂ ಸಹ ಅನುದಾನ ಬಿಡುಗಡೆಯಾಗದಿರುವುದರಿಂದ ಸಾಲ ಮಾಡಿ ಕಾಮಗಾರಿಗಳನ್ನು ನಿರ್ವಹಿಸಿರುವ ಗುತ್ತಿಗೆದಾರರಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ. |
| (ಇ) | ಹಾಗಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಈ ಅನುದಾನವನ್ನು ಈ ಸರ್ಕಾರ ಬಿಡುಗಡೆಗೊಳಿಸುವುದು? (ಸಂಪೂರ್ಣ ಮಾಹಿತಿ ನೀಡುವುದು) | ಬಾಕಿ ಉಳಿದ ಕಂತಿನ ಅನುದಾನವನ್ನು ಬಿಡುಗಡೆ ಮಾಡುವ ಸಂಬಂಧ ಆರ್ಥಿಕ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಲಾಗಿತ್ತು. ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಆಇ 29 ವೆಚ್ಚ 06/2021(ಇ), ದಿನಾಂಕ: 10.03.2021ರಲ್ಲಿ ಕಡಿತಗೊಳಿಸಲಾದ ಅನುದಾನವನ್ನು ಹೆಚ್ಚುವರಿಯಾಗಿ ಒದಗಿಸಲು ಸಾಧ್ಯವಿಲ್ಲವೆಂದು ಹಿಂಬರಹ ನೀಡಿದೆ. ಆದ್ದರಿಂದ, ಅನುದಾನ ಬಿಡುಗಡೆಯಾಗಿರುವುದಿಲ್ಲ. |

**ಸಂಖ್ಯೆ: ಪಿಡಿಎಸ್ 37 ಕೆಎಲ್ಎಸ್ 2021**

**(ಡಾ|| ನಾರಾಯಣಗೌಡ)**
ಸಚಿವರು,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.